# ಶ್ರೀ ಶಂಗೇಶ್ವರ : ಒಂದು ಅಧ್ಯಯನ

This Book is Published with the financial assistance of SRI TIRUMALA TIRUPATI DEVASTHANAM under their scheme of aid to Publish religious books

ನರಸಿಂಹ ಮೂರ್ತಿ

ಶ್ರೀ ಶಂಗೇಶ್ವರ ಯುವಜನ ಸಭಾ ಶಂಬಾಪುರ

SRI KUNDESHWARA–ONDU ADHYAYANA(Kannada)-- a book on the historical and cultural study of Sri Kundeshwara Temple by Narasimha Murthy, 'CHETHANA' Nerambalii Road, Po KOTESHWARA Printed at Bharatha Mudranalaya, Nagoor, P o Kirimanjeshwara and Published by Sri Kundeshwara Yuvajana Sabha, Kumbhasi-576201



First impression January 1991 Pages 64

Copies 1000 Price Rs 5/



ಮುದ್ರಣ : ಭರತ ಮುದ್ರಣಾಲಯ, ನಾಗೂರು

ಕಲೆ : ಸೀಮಾ, ಉಡುಪಿ

ಬೆಲೆ : ಐದು ರೂಪಾಯಿ

# ಪರಿವಿಡಿ

# ಮುನ್ನುಡಿ

ಇತಿಹಾಸಕಾರರೂ ನನ್ನ ಆಪ್ತಮಿತ್ರರೂ ಆದ ಶ್ರೀ ನರಸಿಂಹ ಮೂರ್ತಿಯವರು ತಮ್ಮ ವಿದ್ವತ್ಪೂರ್ಣ ಬರಹಗಳ ಮೂಲಕ ಹಾಗೂ ರಾಷ್ಟ್ರೀಯಸ್ತರದ ವಿಚಾರ ಸಂಕಿರಣಗಳಲ್ಲಿ ಮಂಡಿಸಿದ ಪ್ರಬಂಧಗಳ ಮೂಲಕ ಈಗಾಗಲೇ ಆದರ್ಶ ಸಂಶೋಧಕರೆಂದು ಹೆಸರುಗಳಿಸಿದ್ದಾರೆ. ಕುಂದಾಪುರದ ಬಗ್ಗೆ ಹಾಗೂ ಅಲ್ಲಿಯ ಶ್ರೀ ಕುಂದೇಶ್ವರ ದೇವಸ್ಥಾನದ ಬಗ್ಗೆ ಅವರು ಬರೆದಿರುವ ಈ ಕಿರು ಹೊತ್ತಿಗೆಯನ್ನು ಆಸಕ್ತ ಓದುಗರಿಗೆ ಪರಿಚಯ ಮಾಡಿಕೊಡಲು ನನಗೆ ಅತ್ಯಂತ ಸಂತೋಷವಾಗುತ್ತದೆ.

[illegible]ರದ ರಾಜಕೀಯ – ಆರ್ಥಿಕ – ಸಾಮಾಜಿಕ ಇತಿಹಾಸ, [illegible]ರ [illegible] ಗತಕಾಲದ ಹಾಗೂ ಇಂದಿನ ಧಾರ್ಮಿಕ– [illegible], ಆ ದೇವಾಲಯದ ವಾಸ್ತುರಚನೆ, ಅಲ್ಲಿಯ ಶಾಸನಗಳು, ಕುಂದಾಪುರದ ಸ್ಥಳನಾಮದ ನಿಷ್ಪತ್ತಿ-ಇವುಗಳೆಲ್ಲದರ ಬಗೆಗೂ ಶ್ರೀ ನರಸಿಂಹ ಮೂರ್ತಿಯವರು ಲಭ್ಯವಿರುವ ಐತಿಹಾಸಿಕ ಪುರಾವೆಗಳನ್ನು ಅಳವಡಿಸಿ, ಎಲ್ಲರಲ್ಲೂ ಕುತೂಹಲವನ್ನುಂಟುಮಾಡುವ ರೀತಿಯಲ್ಲಿ ಸಂಕ್ಷಿಪ್ತವಾಗಿ ಬರೆದಿದ್ದಾರೆ ಅಷ್ಟೇ ಅಲ್ಲದೆ ಕೆಲವು ಪ್ರಸ್ತುತ ಶಾಸನಗಳ ಪಾಠಗಳನ್ನು ಹಿಂದಿಗಿಂತಲೂ ಹೆಚ್ಚು ಪೂರ್ಣಗೊಳಿಸಿ, ಪರಿಷ್ಕರಿಸಿ ನೀಡಿದ್ದಾರೆ.

[illegible]ನಾಡಿನ ಎಲ್ಲ ಪುರಾತನ ದೇವಾಲಯಗಳ ಬಗೆಗೂ ಇಂತಹ ಆಧಾರಪೂರ್ಣ ಗ್ರಂಥಗಳು ಹೊರಬಂದುವೇ ಆದಲ್ಲಿ ಅವುಗಳ ಒಟ್ಟು ಅಧ್ಯಯನದಿಂದ [illegible] ನಾಡಿನ ಹಾಗೂ ಅಲ್ಲಿನ ಜನತೆಯ ಇತಿಹಾಸವು ನಮಗೆ [illegible] ಸಮ[illegible]ಕವಾಗಿ ಮೂಡಿ ಬಂದೀತು. ಆದ್ದರಿಂದ ಶ್ರೀ ನರಸಿಂಹ ಮೂರ್ತಿಯವರಿಂದ ಇಂತಹ ಶ್ಲಾಘನೀಯ ಬರವಣಿಗೆಯು ಕೆಲಸವು ಮುಂದುವರೆಯಲೆಂದು ಹಾರೈಸುತ್ತೇನೆ ಹೊತ್ತಿಗೆಯ ಕೊನೆಯ ಪುಟಗಳಲ್ಲಿ ಅವರು ನೀಡಿರುವ ಆಂಗ್ಲ ಸಾರಾಂಶವು ಕುಂದಾಪುರದ ಹಾಗೂ ಕುಂದೇಶ್ವರ ದೇವಾಲಯದ ಕಡೆಗೆ ಕನ್ನಡೇತರ ಓದುಗರ ಮತ್ತು ವಿದ್ವಾಂಸರ ಗಮನಸೆಳೆಯಲು ಅನುವಾಗುವುದು ಖಂಡಿತ

ಮೈಸೂರು

ಕೆ. ವಿ ರಮೇಶ್

# ಪ್ರಕಾಶಕರ ಮಾತು

ಶ್ರೀ ಕುಂದೇಶ್ವರ ದೇವಾಲಯ ನಮ್ಮ- ನಿಮ್ಮೆಲ್ಲರ ಪ್ರಾರ್ಥನೆಯ ಪವಿತ್ರ ತಾಣ. ಈ ದೇಗುಲಕ್ಕೆ ನೂರಾರು ವರ್ಷಗಳ ಇತಿಹಾಸ ಇದೆ. ಇಲ್ಲಿರುವ ಶಾಸನಗಳು ಮತ್ತಿತರ ಆಧಾರಗಳು ಇದನ್ನು ಧೃಡಪಡಿಸುತ್ತವೆ. ಹಿಂದಿನ ರಾಜ-ಮಹಾರಾಜರು ಮತ್ತು ಮಠ-ಮಂದಿರಗಳು ಈ ದೇಗುಲಕ್ಕೆ ಸಲ್ಲಿಸಿರುವ ಕೈಂಕರ್ಯ ಇತಿಹಾಸಗ್ರಂಥಗಳಲ್ಲಿ ದಾಖಲಾಗಿದೆ. ಊರ ಹಿರಿಯರು ಈ ದೇವಸ್ಥಾನಕ್ಕೆ ಸಂಬಂಧಪಟ್ಟಂತೆ ಅನೇಕ ಸ್ವಾರಸ್ಯಕರವಾದ ಸಂಗತಿಗಳನ್ನು ಆಗಾಗ ಹೇಳುತ್ತಿರುವುದುಂಟು. ಇವೆಲ್ಲವುಗಳ ಆಧಾರದ ಮೇಲೆ ಈ ದೇವಸ್ಥಾನದ ಸಮಗ್ರ ಇತಿಹಾಸಕ್ಕೆ ಸಂಬಂಧಿಸಿದಂತೆ ಒಂದು ಸಂಶೋಧನಾತ್ಮಕ ಗ್ರಂಥ ಪ್ರಕಟಿಸಬೇಕೆಂಬ ಹಂಬಲ ಬಹಳ ದಿನಗಳಿಂದ ಇತ್ತು. ಅದೀಗ ಇತಿಹಾಸಕಾರರೂ, ನನ್ನ ಹಿರಿಯ ಮಿತ್ರರೂ ಆದ ಶ್ರೀ ನರಸಿಂಹ ಮೂರ್ತಿಯವರ ಮೂಲಕ ಕಾರ್ಯರೂಪಕ್ಕೆ ಬಂದಿದೆ. ಅವರಿಗೆ ನಾವು ತುಂಬ ಕೃತಜ್ಞರಾಗಿದ್ದೇವೆ.

ಶ್ರೀ ನರಸಿಂಹ ಮೂರ್ತಿಯವರು ಈ ಕುರಿತು ತುಂಬ ಶ್ರಮವಹಿಸಿದ್ದಾರೆ. ಅನೇಕ ಬಾರಿ ಕುಂದಾಪುರಕ್ಕೆ ಬಂದು ಶಾಸನಗಳನ್ನು ಪ್ರತಿಮಾಡಿ, ನಮ್ಮೊಡನೆ ಚರ್ಚಿಸಿ, ವಿಷಯ ಸಂಗ್ರಹಿಸಿದ್ದಾರೆ. ಹಿರಿಯ ವಿದ್ವಾಂಸರ ಮಾರ್ಗದರ್ಶನಪಡೆದು, ಈ ಕುರಿತು ಅಧ್ಯಯನ ನಡೆಸಿದ್ದಾರೆ. ಆದರೂ ಅವರೇ ಹೇಳುವಂತೆ ಇದೊಂದು ಪರಿಪೂರ್ಣ ಗ್ರಂಥ ಅನ್ನುವಂತಿಲ್ಲ. ಯಾರಲ್ಲಾದರೂ ಇನ್ನೂ ಮಾಹಿತಿಗಳಿರಬಹುದು. ದೇವಾಲಯದಲ್ಲಿ 1956ರ ನಂತರದ, ಜೀರ್ಣೋದ್ಧಾರ, ಅಭಿವೃದ್ಧಿ ಕಾರ್ಯ-ಇತ್ಯಾದಿಗಳಿಗೆ ಸಂಬಂಧಿಸಿದಂತೆ ಕೆಲವು ಮಾಹಿತಿಗಳು ಮಾತ್ರ ಲಭ್ಯವಿವೆ. ನಾವು ಈ ಕುರಿತು ಮಾಹಿತಿ ಒದಗಿಸುವಂತೆ ಪತ್ರಿಕೆಗಳ ಮೂಲಕ ಸಾರ್ವಜನಿಕರನ್ನು ವಿನಂತಿಸಿದರೂ ಪ್ರಯೋಜನಕಾರಿಯಾಗಲಿಲ್ಲ. ಈ ಪುಸ್ತಕವನ್ನು ಓದಿದ ನಂತರವೂ ಯಾರಾದರೂ ತಮಗೆ ಗೊತ್ತಿರುವ ಮಾಹಿತಿ ಒದಗಿಸಿದಲ್ಲಿ ಅವನ್ನು ಮರು ಮುದ್ರಣ ಸಂದರ್ಭದಲ್ಲಾದರೂ ಪರಿಶೀಲಿಸಬಹುದು.

ಈ ಗ್ರಂಥದ ಪ್ರಕಟಣೆಗೆ ಅನೇಕ ಮಂದಿ ಅಭಿಮಾನಿಗಳು ಹಲವಾರು
ಲ್ಲಿ ಸಹಕರಿಸಿದ್ದಾರೆ. ಮುಖ್ಯವಾಗಿ ಭರತ ಮುದ್ರಣಾಲಯದವರು ಈ
ಷ್ಟು ಸುಂದರವಾಗಿ ಮುದ್ರಿಸಿಕೊಟ್ಟಿದ್ದಾರೆ. ಈ ಕುರಿತು ಮುತುವರ್ಜಿ
ನನ್ನ ವಿದ್ಯಾರ್ಥಿ ಮಿತ್ರ ಶ್ರೀ ಸುಬ್ರಹ್ಮಣ್ಯ ಐತಾಳರಿಗೆ ನಾವು ತುಂಬ
). ಈ ಗ್ರಂಥದ ಮೂಲಕ ಸಾರ್ವಜನಿಕರಲ್ಲಿ ನಮ್ಮ ದೇವಾಲಯದ
ಂದು ಹೊಸ ಎಚ್ಚರ-ಮತ್ತಷ್ಟು ಅಭಿಮಾನ ಮೂಡಿ ಬಂದರೆ
ಃ ಪ್ರಯತ್ನ ಸಾರ್ಥಕ.

ದಶಮಿ
ಕ್ಟೋಬರ 1989 —ಎಚ್. ವಿ. ನರಸಿಂಹ ಮೂರ್ತಿ

# ಅರಿಕೆ

ಇದೊಂದು ಕಿರುಹೊತ್ತಿಗೆ. ಕುಂದೇಶ್ವರ ದೇವಾಲಯಕ್ಕೆ ಮಾತ್ರ ಸೀಮಿತವಾಗಿದೆ. ಈ ಅಧ್ಯಯನವನ್ನು ಮಾಡಲು ದೇವಾಲಯದ ಆಡಳಿತ ಮೊಕ್ತೇಸರರು ಮತ್ತು ಆಡಳಿತಮಂಡಳಿಯವರು ಅವಕಾಶಮಾಡಿಕೊಟ್ಟು ಇದರ ಪ್ರಕಟಣೆಯ ಭಾರವನ್ನು ಹೊತ್ತಿದ್ದಾರೆ. ಇವರಿಗೆ ನಾನು ತುಂಬ ಆಭಾರಿಯಾಗಿದ್ದೇನೆ.

ಸದಾಕಾಲ ನನ್ನ ಸಂಶೋಧನಾ ಕೆಲಸದಲ್ಲಿ ಆಸಕ್ತಿ ವಹಿಸಿ ಉತ್ತೇಜನ ನೀಡುತ್ತಿರುವವರು ಕೇಂದ್ರ ಸರ್ಕಾರದ ಶಾಸನ ನಿರ್ದೇಶನಾಲಯ (ಮೈಸೂರು) ದ ನಿರ್ದೇಶಕರಾದ ಡಾ। ಕೆ. ವಿ. ರಮೇಶ ಅವರು. ತಮ್ಮ ಬಿಡುವಿಲ್ಲದ ಕೆಲಸದ ನಡುವೆ ಈ ಕೃತಿಯನ್ನು ಓದಿ ಹಲವಾರು ಉಪಯುಕ್ತ ಸಲಹೆಗಳನ್ನಿತ್ತು ಮಾರ್ಗದರ್ಶನ ಮಾಡಿದ್ದಾರೆ. ಅಷ್ಟೆ ಅಲ್ಲ, ಇದಕ್ಕೊಂದು ಮುನ್ನುಡಿ ಬರೆದು ಹರಸಿದ್ದಾರೆ. ಇವರ ಈ ಔದಾರ್ಯಕ್ಕೆ ನಾನು ತುಂಬ ಋಣಿಯಾಗಿದ್ದೇನೆ.

ಮಿತ್ರರಾದ ಶ್ರೀ ಎಚ್. ವಿ. ನರಸಿಂಹಮೂರ್ತಿ ಮತ್ತು ಶ್ರೀ ಕನರಾಡಿ ವಾದಿರಾಜ ಭಟ್ ನನ್ನ ಈ ಕೆಲಸದಲ್ಲಿ ತುಂಬ ಕಾಳಜಿ ವಹಿಸಿದ್ದಾರೆ. ಇವರಿಗೆ ನಾನು ಕೃತಜ್ಞನಾಗಿದ್ದೇನೆ.

ಪ್ರಸ್ತುತ ದೊರೆತಿರುವ ಆಧಾರಗಳ ಮೇಲೆ ಕುಂದೇಶ್ವರದ ಐತಿಹಾಸಿಕ ಬೆಳವಣಿಗೆಯ ಅಧ್ಯಯನ ಮಾಡಲಾಗಿದೆ. ಇದಕ್ಕೆ ಸಂಬಂಧಪಟ್ಟ ಶಾಸನಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ. ನಮ್ಮ ಜಿಲ್ಲೆಯ ದೇವಾಲಯಗಳಿಗೆ ಸಾಮಾನ್ಯವಾಗಿ ದೊರೆಯುವ ಪೌರಾಣಿಕ ಮಾಹಿತಿ ಈ ದೇವಾಲಯಕ್ಕೆ ಇಲ್ಲ. ಇದಕ್ಕೆ ಸಂಬಂಧಪಟ್ಟಂತೆ ಓದುಗರಲ್ಲಿ ಹೆಚ್ಚಿನ ಮಾಹಿತಿ ಇದ್ದರೆ ಅದಕ್ಕೆ ಸ್ವಾಗತವಿದೆ. ಪರಿಷ್ಕರಣ ಕಾಲದಲ್ಲಿ ಅವುಗಳ ಉಪಯುಕ್ತತೆಯನ್ನು ಸ್ಮರಿಸಲಾಗುವುದು.

ಲೇಖಕ

# ಕುಂದಾಪುರದ ಕುಂದೇಶ್ವರ

ಕುಲಕ್ಕೊಂದು ದೇವರು; ಊರಿಗೊಂದು ದೇವಾಲಯ– ಇವು ನಮ್ಮ ಸಂಸ್ಕೃತಿ, ಪರಂಪರೆಯ ಪ್ರತೀಕಗಳು. ತನಗೆ ಅರಿವು ಮೂಡಿದಂದಿನಿಂದ ಮಾನವ ತನ್ನ ಸುತ್ತಲಿನ ಅಗೋಚರ ಶಕ್ತಿಗಳನ್ನು ಗಮನಿಸಿದ; ಭಯಪಟ್ಟ; ಅನಂತರ ಪೂಜಿಸಲು ಪ್ರಾರಂಭಿಸಿದ. ಕಾಲಾನಂತರ ಈ ಶಕ್ತಿಗಳ ಬಗ್ಗೆ ಶ್ರದ್ಧೆ–ಭಕ್ತಿ ಹುಟ್ಟಿಕೊಂಡಿತು. ಭಕ್ತಿಯಿಂದ ಪೂಜಿಸಿ ಅವುಗಳನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡಿದ. ತನ್ನ ಊಹೆಗೆ ನಿಲುಕದ ಬಾಹುಬಲಕ್ಕೆ ಸಿಲುಕದ ಎಲ್ಲ ಪ್ರಕ್ರಿಯೆಯ ಹಿಂದೆ ಅಗೋಚರ ಶಕ್ತಿಯ ಚಾಲನೆ ಇದೆ ಎಂದು ಭಾವಿಸಿದ. ಅದು ದೈವಿಕಶಕ್ತಿ ಎಂಬ ಪರಿಕಲ್ಪ ಅವನಲ್ಲಿ ಮೂಡಿತು. ಅಂದಿನಿಂದ ದೇವರ ವಿಚಾರಮಂಥನ ಪ್ರಾರಂಭವಾಯಿತು. ಋಷಿ–ಮುನಿಗಳ, ಸಾಧು–ಸಂತರ ಮೂಲಕ ಹಾಗೂ ಸ್ವಪ್ರೇರಣೆಯಿಂದ ಈ ಕಾರ್ಯ ನಡೆಯುತ್ತಲೇ ಸಾಗಿದೆ. ಜಪ–ತಪ, ನೇಮ–ನಿಷ್ಠೆ, ಹೋಮ, ಪೂಜೆ, ಧ್ಯಾನ- ಎಲ್ಲವೂ ಈ ನಿಟ್ಟಿನಲ್ಲಿ ಪ್ರಯೋಗಕ್ಕೆ ಬಂದಿರುವ ಮಾರ್ಗೋಪಾಯಗಳು.

'ಪೂಜೆ' ನಮ್ಮೆಲ್ಲರ ಪರಿಕಲ್ಪನೆಗಳನ್ನು ಮೀರಿ ಬೆಳೆದು ನಿಂತಿದೆ. ಮೊದಲು ಅಗ್ನಿಯಲ್ಲೊ ಅಥವಾ ಕಲಶದಲ್ಲೊ ದೇವರನ್ನು ಆವಾಹಿಸಿ ಪೂಜಿಸಿದ್ದುಂಟು. ಕ್ರಮೇಣ ದೇವರಿಗೊಂದು ರೂಪಕೊಟ್ಟು ಪ್ರತಿಮೆಗಳ ರಚನೆ ಹಾಗೂ ಪೂಜೆ ಪ್ರಾರಂಭ. ವಿಗ್ರಹ ಆರಾಧನೆ ಆಲಯಗಳ ರಚನೆಗೆ ನಾಂದಿ. ಇದರಿಂದ ಎಲ್ಲೆಡೆ ಗುಹಾಲಯ, ಗುಡಿ, ಗೋಪುರಗಳ ನಿರ್ಮಾಣ. ಭಕ್ತಿಯನ್ನು ಉತ್ತುಂಗಕ್ಕೊಯ್ಯುವಂತಹ ಚಿತ್ತಚಮತ್ಕಾರಿಕೆಯ ಭವನಗಳ ನಿರ್ಮಾಣ ಕಲೆ ಧರ್ಮದೊಂದಿಗೆ ಸಮ್ಮಿಳಿಸಿ ಭವ್ಯತೆಯ ಪರಾಕಾಷ್ಠೆಗೇರಿತು.

ಪೂಜಾವಿಧಾನಗಳು ಸ್ಥಳದಿಂದಸ್ಥಳಕ್ಕೆ ವ್ಯತ್ಯಾಸವಾಗಬಹುದು. ಆದರೆ ದೇವರನ್ನು ಪೂಜಿಸಬೇಕೆಂಬ ಭಾವನೆ ಒಂದೇ. ಹಾಗಾಗಿ ಪ್ರತಿ ಊರು-ಗ್ರಾಮಗಳಲ್ಲಿ ದೇವಾಲಯ ನಿರ್ಮಾಣ. ದಕ್ಷಿಣಕನ್ನಡಜಿಲ್ಲೆಯಲ್ಲಿ ನಮಗೆ

ಸರ್ವಸಾಮಾನ್ಯ ಕಾಣಸಿಗುವ ದೃಶ್ಯ ಇದು. ಕಡಲತಡಿಯಲ್ಲಿದ್ದು, ಸಹ್ಯಾದ್ರಿಯ ಸೆರಗನ್ನು ಹೊದ್ದಿರುವ ಕುಂದಾಪುರ ಇದಕ್ಕೆ ಹೊರತಾಗಿಲ್ಲ. ಕೊಲ್ಲೂರು(ಸೌಪರ್ಣಿಕಾ), ಚಕ್ರಾ ಮತ್ತು ವರಾಹಿ ಹಾಗು ಇದಕ್ಕಿರುವ ಉಪನದಿಗಳು ಕೂಡಿ ಕಡಲನ್ನು ಸೇರುವ ಸ್ಥಳ ಮನೋಹರವಾಗಿದೆ. ವಿಶಾಲವಾದ ಹಿನ್ನೀರಿನ ತಾಣವೊಂದು ಸೃಷ್ಟಿಯಾಗಿದೆ. ಇದರ ಉತ್ತರದ ದಂಡೆಯಲ್ಲಿ ಗಂಗೊಳ್ಳಿ; ದಕ್ಷಿಣದಲ್ಲಿ ಕುಂದಾಪುರ. ಇಲ್ಲಿಂದ ಸುಮಾರು ಎಪ್ಪತ್ತು ಕಿಲೋಮೀಟರ್ ಪೂರ್ವಕ್ಕೆ ವರಾಹಿ ದಂಡೆಯಲ್ಲಿ ಪ್ರಖ್ಯಾತ ಬಂದರಾಗಿದ್ದ ಬಸರೂರು. ಕುಂದಾಪುರ ಈಗ ದಕ್ಷಿಣಕನ್ನಡ ಜಿಲ್ಲೆಯ ಪ್ರಮುಖ ನಗರವಾಗಿ ಬೆಳೆಯುತ್ತಿದೆ.

## ಕುಂದಾಪುರ-ಕುಂದೇಶ್ವರ:

ಕುಂದಾಪುರದಲ್ಲಿ ಹಲವು ದೇವಾಲಯಗಳಿವೆ. ಅವರಲ್ಲಿ ಪ್ರಮುಖವಾದುದು ಕುಂದೇಶ್ವರ. ಸಾಮಾನ್ಯವಾಗಿ ಬೆಳೆದು ಬಂದಿರುವ ಅಭಿಪ್ರಾಯದಂತೆ ಕುಂದೇಶ್ವರ - ಕುಂದಾಪುರದ ಹೆಸರಿಗೆ ಕಾರಣ. ಈ ಅಭಿಪ್ರಾಯವೇ ಹಲವಾರು ಇತಿಹಾಸಗ್ರಂಥಗಳಲ್ಲಿ ವ್ಯಕ್ತವಾಗಿದೆ. ದಕ್ಷಿಣಕನ್ನಡಜಿಲ್ಲಾ ಗೆಜೆಟಿಯರ್ (ಪು. 729)ನಲ್ಲಿ 'ಪಂಚಗಂಗಾವಳಿ ನದಿ ಸಮೀಪ ಕುಂದವರ್ಮನು ನಿರ್ಮಿಸಿದ ಕುಂದೇಶ್ವರದೇವಾಲಯದಿಂದ ಈ ಊರಿಗೆ ಹೆಸರು ಬಂದಿರಬಹುದೆಂದು ತಿಳಿಯಬಹುದು'-ಎಂದು ಹೇಳಿದೆ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ವಿಶ್ವಕೋಶದಲ್ಲಿ (ಪು 412) 'ಕುಂದವರ್ಮನೆಂಬ ಅರಸ ಪಂಚಗಂಗಾವಳಿಯ ಹತ್ತಿರ ಕಟ್ಟಿಸಿದ ಕುಂದೇಶ್ವರ ದೇವಾಲಯದಿಂದ ಇದಕ್ಕೆ ಕುಂದಾಪುರವೆಂಬ ಹೆಸರಾಯಿತೆಂದು ಪ್ರತೀತಿ'-ಎಂದು ಉಲ್ಲೇಖಿಸಲಾಗಿದೆ.

ಮತ್ತೊಂದು ಅಭಿಪ್ರಾಯದಂತೆ ಪೋರ್ಚುಗೀಸರು ಕುಂದಾಪುರಕ್ಕೆ ಕಾಲಿಡುವ ಮೊದಲು ಕುಂದಾಪುರ ಕುಂದವರ್ಮನೆಂಬ ತುಂಡರಸನ ಅಧಿಪತ್ಯಕ್ಕೆ ಸೇರಿತ್ತು. ಆತ ಶಿವಭಕ್ತ; ಕುಂದೇಶ್ವರ ಆತನ ಮನೆದೇವರು. ಇಂದಿನ ಕುಂದೇಶ್ವರ ದೇವಾಲಯ ಆತನ ಸೃಷ್ಟಿ. ಕುಂದೇಶ್ವರದಿಂದಲೇ ಈ ಊರಿಗೆ ಕುಂದಾಪುರವೆಂದು ನಾಮಕರಣವಾಗಿರಬೇಕೆಂದು ಬಲ್ಲವರ ಅಭಿಪ್ರಾಯ. (ಮಂಜುವಾಣಿ: ಮಾರ್ಚ್ 1982: ಪುಟ 27)

ವಿಷಯದ ರೂಪಗಳೇನೇ ಇರಲಿ ಭಾವನೆ ಒಂದೆ. ಇದರ ಪ್ರಕಾರ ಕುಂದವರ್ಮನೆಂಬವನು ಕುಂದೇಶ್ವರ ದೇವಾಲಯ ನಿರ್ಮಿಸಿದ. ದೇವಾಲಯ ಊರಿಗೆ ಹೆಸರು ಕೊಟ್ಟಿತು.

ಈ ಕುಂದವರ್ಮ ಯಾರು ? ಯಾವ ಕಾಲದಲ್ಲಿದ್ದ ? ಈ ವಿಚಾರ ವನ್ನು ಇಲ್ಲಿಯವರೆಗೆ ಯಾರೂ ಚಿಂತಿಸಿಲ್ಲ. ಮೇಲಿನ ಉದಾಹರಣೆಗಳಲ್ಲಿ ಮೂರನೆಯದರಲ್ಲಿ ಈ ಕುಂದವರ್ಮ ಒಬ್ಬ 'ತುಂಡರಸ'; ಪೋರ್ಚುಗೀಸರು ಕುಂದಾಪುರಕ್ಕೆ ಬರುವ ಮೊದಲು ಇದ್ದವ–ಎಂದು ಹೇಳಿದೆ. ಪೋರ್ಚುಗೀಸರು ವಿಜಯನಗರ ಚಕ್ರವರ್ತಿಗಳ ಕಾಲದಲ್ಲಿ ಭಾರತಕ್ಕೆ (ಪಶ್ಚಿಮ ಕರಾವಳಿಗೆ) ಬಂದರು. ಇವರು ಕುಂದಾಪುರಕ್ಕೆ ಬಂದುದು ಕೆಳದಿ ಅರಸರ ಕಾಲದಲ್ಲಿ. ಈ ಸಮಯದಲ್ಲಿ ಕುಂದಾಪುರವು ಕುಂದವರ್ಮನೆಂಬ 'ತುಂಡರಸ'ನ ಅಧೀನವಿತ್ತು, ಎಂಬ ವಿಚಾರಕ್ಕೆ ಆಧಾರ ಕಂಡು ಬರುವುದಿಲ್ಲ. ವಿಪುಲವಾಗಿ ದೊರೆಯುವ ವಿಜಯನಗರಕಾಲದ ಶಾಸನಗಳಲ್ಲೆಲ್ಲೂ ಕನಿಷ್ಠ ಈ ಸಂಶಯ ಹುಟ್ಟಿಸುವ ವಿಚಾರ ಸಹ ವ್ಯಕ್ತವಾಗಿಲ್ಲ. ಅಂದ ಮೇಲೆ ಪೋರ್ಚುಗೀಸರ ಆಗಮನಕ್ಕೆ ಮೊದಲು ಕುಂದವರ್ಮನೆಂಬ 'ತುಂಡರಸ' ಇಲ್ಲಿ ಆಳಿದ ಎನ್ನುವುದು ಸದ್ಯಕ್ಕಂತೂ ಆಧಾರರಹಿತ. ಏಕೆಂದರೆ 'ಕುಂದಾಪುರ' ಎಂಬ ಊರು ಹಾಗೂ ಅಲ್ಲಿಯ 'ಕುಂದೇಶ್ವರ' ಎಂಬ ದೇವಾಲಯ ವಿಜಯನಗರ ಪೂರ್ವಕಾಲದಲ್ಲೇ ಇದ್ದುವು. ಇದಕ್ಕೆ ಹಲವಾರು ಆಧಾರಗಳಿವೆ.

ಡಾ॥ ಪಿ. ಗುರುರಾಜ ಭಟ್ಟರ ಪ್ರಕಾರ 'ಕುಂದಾಪುರದ ಪ್ರಾಚೀನತೆಯ ಕುರುಹು ಆಗಿರುವ ಕಟ್ಟಡವೆಂದರೆ ಕುಂದೇಶ್ವರದೇವಾಲಯ. ಕುಂದಾಪುರದ ಈಶ್ವರನು ಕುಂದೇಶ್ವರನು. ಈ ದೇವಾಲಯವು ಈಗ ಜೀರ್ಣೋದ್ಧಾರ ಹೊಂದಿದ್ದರೂ ಕೆಲವು ಅವಶೇಷಗಳ ಸಾಧಾರದಿಂದ ಈದೇಗುಲದ ಮೂಲ ರಚನೆ ಹೊಯ್ಸಳರ ಕಾಲದ ಮಧ್ಯಭಾಗಕ್ಕಿಂತೂ ನಿಸ್ಸಂದೇಹವಾಗಿ ಅನ್ವಯಿಸುತ್ತದೆ ಎಂದು ಹೇಳಬಹುದು. ಗೋಡೆಗಳ ಪಿಲಾಸ್ಟರುಗಳು ಹಾಗೂ ಅನೇಕಲ್ಲುಗಳೂ ಇದಕ್ಕೆ ಸಾಕ್ಷಿಗಳಾಗುತ್ತವೆ'. ('ಕುಂದಾಪುರದ ಐತಿಹಾಸಿಕ ಹಿನ್ನೆಲೆ'; ಯುಬಿಳ ಸಮಾಜ ಪ್ರಕಟಣೆ–1967; ಪುಟ 83)

ಕ್ರಿ. ಶ. 1262ಕ್ಕೆ ಸಲ್ಲುವ ಆಳುಪ ರಾಜ ವೀರಪಾಂಡ್ಯದೇವನ ಶಾಸನವೊಂದರಲ್ಲಿ ಈ ಊರನ್ನು 'ಕುಂದಾಪುರಗ್ರಾಮ' ಎಂದೇ ಸ್ಪಷ್ಟವಾಗಿ ಹೆಸರಿಸಲಾಗಿದೆ. ಅಂದಮೇಲೆ ಕ್ರಿ.ಶ. ಹದಿಮೂರನೆಯ ಶತಮಾನದ ವೇಳೆಗೆ ಈ ಊರು 'ಕುಂದಾಪುರ' ಎಂದು ಹೆಸರು ಪಡೆದಿತ್ತು.

## ಕುಂದವರ್ಮ ಯಾರು?

ಪೋರ್ಚುಗೀಸರ ಕಾಲಕ್ಕೆ ಕುಂದವರ್ಮನೆಂಬ ಒಬ್ಬ ತುಂಡರಸ ಇರಲಿಲ್ಲ ಎಂದು ಮೇಲೆ ಹೇಳಿದೆ. ಅಂದರೆ ಕುಂದವರ್ಮನೆಂಬ ಒಬ್ಬ ಅರಸ ಇರಲೇ ಇಲ್ಲವೆ? ಈ ಪ್ರಶ್ನೆ ಏಳುವುದು ಸಹಜ. ಇದರ ಪರಿಹಾರಕ್ಕೆ ಕ್ರಿ. ಶ. ಹದಿಮೂರನೆಯ ಶತಮಾನಕ್ಕೆ ಹಿಂದಿನ ನಮ್ಮ ಜಿಲ್ಲೆಯ ಇತಿಹಾಸವನ್ನು ಅವಲೋಕಿಸುವುದು ಸೂಕ್ತ. ತುಳುನಾಡಿನ ಪ್ರಥಮ ಅರಸರು ಆಳುಪರು. ಇವರು ಕ್ರಿ. ಶ. 450ರ ವೇಳೆಗಾಗಲೇ ಪ್ರಾಬಲ್ಯ ಪಡೆದು ಕದಂಬ ಅರಸರ ಸಹವರ್ತಿಗಳಾಗಿದ್ದರು. (ಡಾ॥ ಕೆ. ವಿ. ರಮೇಶ್: 'ಎ ಹಿಸ್ಟರಿ ಆಫ್ ಸೌತ್ ಕೆನರ' :ಪುಟ 29–33; ಹಲ್ಮಿಡಿ, ಕೊಳಗುಂದ ಶಾಸನಗಳನ್ನು ನೋಡಿ). ಈ ವಂಶದ ಇತಿಹಾಸದಲ್ಲಿ ಕನ್ದವರ್ಮರಸ (ಡಾ॥ ಕೆ. ವಿ. ರಮೇಶ್, 'ತುಳುನಾಡಿನ ಶಾಸನಗಳು': ವಡ್ಡರ್ಸೆ ಶಾಸನ: ಎ ಎಚ್ ಎಸ್‌ಕೆ: ಪುಟ-44, 49-50) ಕುಂದವರ್ಮರಸ (ಎ ಎಚ್ ಎಸ್ ಕೆ:ಪುಟ 43, 45–46, 49–50; ಎಪಿಗ್ರಾಫಿಯ ಕರ್ನಾಟಕ VI. KP. 38, ಕಿಗ್ಗ ಶಾಸನ)ಮತ್ತು ಕುಂದವರ್ಮ ಎಂಬ ಹೆಸರುಗಳನ್ನು ಕಾಣುತ್ತೇವೆ. ಕನ್ದವರ್ಮರಸ ಮತ್ತು ಕುಂದವರ್ಮರಸ ಇವರನ್ನು ವಡ್ಡರ್ಸೆ (ಸುಮಾರು ಕ್ರಿ. ಶ. 650) ಮತ್ತು ಕಿಗ್ಗ (ಸುಮಾರು ಕ್ರಿ. ಶ. 680) ಶಾಸನಗಳು ಹೆಸರಿಸುತ್ತವೆ. ಆದರೆ ಇವರು ಇಬ್ಬರಲ್ಲ, ಒಬ್ಬನೆ; ಅಲ್ಲದೆ ಈತ ರಾಜನಲ್ಲ. ಆಳುಪರಾಜ ಒಂದನೆಯ ಆಳುಪರಸನ ಪ್ರಮುಖ ಪ್ರಾಂತಾಧಿಕಾರಿ ಎನ್ನುವುದನ್ನು ಡಾ॥ ಕೆ. ವಿ. ರಮೇಶರು ತಮ್ಮ ಗ್ರಂಥದಲ್ಲಿ ಆಧಾರಸಹಿತ ಸ್ಪಷ್ಟಪಡಿಸಿದ್ದಾರೆ. (ನೋಡಿ ಎ ಎಚ್ ಎಸ್ ಕೆ: ಪುಟ 43-50) ಪ್ರಾಚೀನ ಆಳುಪರು ಕುಂಭೇಶ್ವರ ಸಮೀಪದ ಹಟ್ಟಿಯಂಗಡಿಯನ್ನು ತಮ್ಮ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡಿದ್ದರು (ಡಾ॥ ಬಿ. ಎನ್. ಎಸ್. ಮಂಜಿತ್ತಾಯ,

' ಹಟ್ಟಿಯಂಗಡಿ : ಒಂದು ಐತಿಹಾಸಿಕ ಸಮೀಕ್ಷೆ ' :) ಒಂದನೆಯ ಆಳುಪರಸನ ಪ್ರಮುಖ ಪ್ರಾಂತಾಧಿಕಾರಿಯಾದ ಕುಂದವರ್ಮರಸನು ಈ ಹಟ್ಟಿಯಂಗಡಿಯಿಂದ ತನ್ನ ಆಡಳಿತಕರ್ತವ್ಯವನ್ನು ನಿರ್ವಹಿಸಿರಬಹುದು.

ಒಂದನೆಯ ಆಳುಪರಸ ಮತ್ತು ಅವನ ಅಧಿಕಾರಿ ಕುಂದವರ್ಮರಸರ ಆಳ್ವಿಕೆಯಾಗಿ ಮುನ್ನೂರು ವರ್ಷಗಳು ಕಳೆದ ನಂತರ ಕೇಳಿ ಬರುವ ಹೆಸರು ಆಳುಪರಾಜ ಕುಂದವರ್ಮನು. ಈತನ ಕಾಲ ಸುಮಾರು ಕ್ರಿ. ಶ. 950-980. ಈತ 'ಬಾಲಚಂದ್ರ ಶಿಖಾಮಣಿ' ಎಂಬ ಬಿರುದನ್ನು ಹೊಂದಿದ್ದ. (ಎ ಎಚ್ ಎಸ್ ಕೆ. ಪು 96-98)

ಈ ಇಬ್ಬರಲ್ಲಿ ಯಾರು ಕುಂದೇಶ್ವರ ದೇವಾಲಯವನ್ನು ನಿರ್ಮಿಸಿದರು? ಇದನ್ನು ನಿರ್ಧರಿಸಲು ಶಾಸನಾಧಾರವಿಲ್ಲ. ರಾಜಕುಂದವರ್ಮ (ಮಂಗಳೂರಿನ) ಕದರಿಕಾವಿಹಾರದಲ್ಲಿ ಲೋಕೇಶ್ವರನ ಪ್ರತಿಮೆಯನ್ನು ಪ್ರತಿಷ್ಠಾಪಿಸಿದನು. ಈ ವಿಚಾರ ಪ್ರತಿಮೆಯ ಪೀಠದಲ್ಲಿನ ಶಾಸನದಿಂದ ತಿಳಿದು ಬರುತ್ತದೆ. (ತು. ನಾ. ಶಾ. 25) ಈತನೇ ಕುಂದೇಶ್ವರ ದೇವಾಲಯ ನಿರ್ಮಿಸಿದ್ದರೆ ಅದೂ ಒಂದು ಪ್ರಮುಖ ಘಟನೆಯಾಗುತ್ತಿತ್ತು. ಸುಭದ್ರವಾದ ನೆಲೆ ಮತ್ತು ಅಪಾರ ಸಂಪತ್ತು ದೇವಾಲಯಕ್ಕೆ ದೊರೆಯುತ್ತಿತ್ತು. ಈ ಸಂಗತಿ ಶಾಸನವೊಂದರಲ್ಲಿ ದಾಖಲೆಯಾಗುತ್ತಿತ್ತು. ಆದರೆ ಅಂತಹ ದಾಖಲೆಯೊಂದು ದೊರೆಯದಿರುವ ಕಾರಣ ದೇವಾಲಯ ನಿರ್ಮಾಣ ಈತನದೆಂದು ಹೇಳಲು ಕಷ್ಟ.

ಆಳುಪೇಂದ್ರ ಕುಂದವರ್ಮ ಇದನ್ನು ನಿರ್ಮಿಸದಿದ್ದರೆ ಮತ್ತಾರು ? ಅಧಿಕಾರಿ ಕುಂದವರ್ಮರಸನೆ ? ಹಾಗೆಂದು ಹೇಳಲೂ ಶಾಸನಾಧಾರವಿಲ್ಲ. ಕ್ರಿ. ಶ . 680 ಕ್ಕೆ ಸಲುವ ಒಂದನೆಯ ಆಳುಪರಸನ ಕಿಗ್ಗ ಶಾಸನದಲ್ಲಿ ರಾಜನು ಕೀಳ್ಗಾನೇಶ್ವರ ದೇವರಿಗೆ ದಾನಮಾಡಿದ್ದ ಹಾಗು ಹಿಂದಿನ ದಾನಗಳನ್ನು ಸ್ಥಿರೀಕರಿಸಿ ಸರ್ವಮಾನ್ಯ ಮಾಡಿದ ವಿಚಾರ ವ್ಯಕ್ತವಾಗಿದೆ. (ಈಗ ಈ ಶಿವನನ್ನು ಋಷ್ಯಶೃಂಗೇಶ್ವರ ಎಂದು ಕರೆಯುತ್ತಾರೆ) ಅಂದರೆ ಒಂದನೆಯ ಆಳುಪರಸನು ಆಳ್ವಿಕೆ (ಸುಮಾರು ಕ್ರಿ. ಶ. 650-680) ನಡೆಸುವುದಕ್ಕೆ ಮುಂಚೆಯೇ ಕೀಳ್ಗಾನೆ ಅಂದರೆ ಕಿಗ್ಗದಲ್ಲಿ ಶಿವದೇವಾಲಯವಿದ್ದು ಅದಕ್ಕೆ

ದಾನ-ಧರ್ಮಗಳನ್ನು ಮಾಡಲಾಗಿತ್ತು. ಆಳುಪರಸ ಸಹ ದಾನಮಾಡಿದು ದಲ್ಲದೆ ಹಿಂದಿನದು ಸೇರಿ ಎಲ್ಲವನ್ನೂ ಸರ್ವಮಾನ್ಯ (ಸಂಪೂರ್ಣ ತೆರಿಗೆ ರಹಿತ)ವಾಗಿ ಮಾಡಿದನು. ಆಳುಪರು ಶೈವರು. ಈ ದಾನ ಅವರ ಧರ್ಮನಿಷ್ಠೆಯನ್ನು ಸೂಚಿಸುತ್ತದೆ.

ಕಿಗ್ಗ ಶಾಸನದಿಂದ ಕುಂದೇಶ್ವರ ಸಮಸ್ಯೆ ಪರಿಹಾರವಾಗುವುದಿಲ್ಲ. ಕೀಳ್ಗಾನೇಶ್ವರನ ಕಾಲ ಮಾತ್ರ ಸ್ಪಷ್ಟವಾಗುತ್ತದೆ. ಪ್ರಾಯಶಃ ಒಂದನೆಯ ಆಳುಪರಸನ ಆಜ್ಞಾನುವರ್ತಿಯಾದ ಕುಂದವರ್ಮರಸನ ಕಾಲದಲ್ಲಿ ಅಪೇಕ್ಷಿತ ಜನರಿಂದ ಸಾಮಾನ್ಯ ರೀತಿಯಲ್ಲಿ ಕುಂದೇಶ್ವರ ದೇವಾಲಯ ನಿರ್ಮಿತ ವಾಗಿರಬಹುದು. ಚಚ್ಚೌಕವಾದ ಗರ್ಭಗುಡಿ ತೀರ ಸರಳವಾದ ಪಾಣಿಪೀಠ ಈ ಅನುಮಾನಕ್ಕೆ ಎಡೆಮಾಡಿಕೊಡುತ್ತದೆ. ಈ ಆಧಾರದಲ್ಲಿ ಗರ್ಭಗುಡಿ ಭಾಗವನ್ನು ಕ್ರಿ. ಶ. ಏಳು-ಎಂಟನೆಯ ಶತಮಾನಕ್ಕೆ ಸೇರಿಸಿರಬಹುದು.

ಕುಂದೇಶ್ವರ ದೇವಾಲಯ ರಾಜ ಅಥವಾ ಅವನ ಅಧಿಕಾರಿಯಿಂದ ನಿರ್ಮಿತವಾಗಿದ್ದರೆ ಅದು ಒಂದಲ್ಲ ಒಂದು ರೀತಿಯಲ್ಲಿ ಪ್ರಕಟಗೊಳ್ಳುತ್ತಿತ್ತು. ಇವರು ತಮ್ಮ ಅಂತಸ್ತು ಮತ್ತು ಗೌರವಗಳಿಗೆ ತಕ್ಕಂತೆ ರಚನಾಕೌಶಲವನ್ನು ವ್ಯಕ್ತಪಡಿಸುತ್ತಿದ್ದರು. ದೇವಾಲಯದ ಮಾಡಿಗೆ ಕಲ್ಲಿನ ಅಥವಾ ತಾಮ್ರದ ಹೊದಿಕೆ ಆಗಲೇ ಬರುತ್ತಿತ್ತು. ಆದರೆ ತೀರ ಇತ್ತೀಚಿನವರೆಗೂ ಗೋಪುರ ಸಹಿತವಾಗಿ ಗರ್ಭಗುಡಿಗೆ ಇದ್ದದ್ದು ಮುಳಿ ಹುಲ್ಲಿನ ಮಾಡು. 1950ರ ಸುಮಾರಿಗೆ ಇದಕ್ಕೆ ತಾಮ್ರದ ಹೊದಿಕೆ ಬಂತು.

ಅಂದಮೇಲೆ ಅಧಿಕಾರಿ ಕುಂದವರ್ಮರಸನಾಗಲಿ, ರಾಜ ಕುಂದವರ್ಮ ಆಳುಪೇಂದ್ರನಾಗಲಿ ಈ ದೇವಾಲಯದ ರಚಯಿತರಲ್ಲ. ನಮ್ಮ ಜಿಲ್ಲೆಯ ಹಲವಾರು ದೇವಾಲಯಗಳಂತೆ ಕುಂದೇಶ್ವರ ಸಹ ಪ್ರಥಮವಾಗಿ ಜನ ಸಾಮಾನ್ಯರ ಕೊಡುಗೆ. ದಿನ ಕಳೆದಂತೆ ಇವರ ಅಭಿವೃದ್ಧಿ.

**ಕುಂದೇಶ್ವರ-ಕುಂದಾಪುರ ನಿಷ್ಪತ್ತಿ :**

ಅಧಿಕಾರಿಯಾಗಲೀ, ರಾಜನಾಗಲಿ ದೇವಾಲಯ ನಿರ್ಮಾಣಕ್ಕೆ ಕಾರಣರಾಗಲಿಲ್ಲವಾದಲ್ಲಿ ಕುಂದೇಶ್ವರ, ಕುಂದಾಪುರ ಎಂಬ ಹೆಸರುಗಳು ಹೇಗೆ

ಬಂದವು ? ಜನರೇ ದೇವರಿಗೆ ಈ ಹೆಸರಿತ್ತು, ಅಧಿಕಾರಿಯಾದ ಕುಂದವರ್ಮರಸನನ್ನು ಚಿರಾಯುವನ್ನಾಗಿ ಮಾಡಿದರೆ ? ಅಥವಾ ಊರಿಂದ ದೇವರಿಗೆ ಈ ಹೆಸರು ಬಂತೆ ? ಇದರಲ್ಲಿ ಯಾವುದು ಮೊದಲು ಎಂಬುದನ್ನು ನಿರ್ಧರಿಸಿದರೆ ನಮ್ಮ ಸಮಸ್ಯೆ ಪರಿಹಾರವಾದಂತೆ.

ಈ ನಿಟ್ಟಿನಲ್ಲಿ ಸ್ಥಳನಾಮವನ್ನು ಸ್ವಲ್ಪ ಕೂಲಂಕಷವಾಗಿ ಪರಿಶೀಲಿಸುವುದು ಸೂಕ್ತ. ಈ ಮೊದಲೇ ಸ್ಥಳನಾಮಕ್ಕೆ ಒಂದು ಕಾರಣ ಕಂಡುಕೊಂಡಾಗಿದೆ. ಅದರ ಸಿಂಧುತ್ವದ ಬಗ್ಗೆ ಅನುಮಾನವಿರುವುದರಿಂದ ಹೊಸ ವಿಚಾರವನ್ನು ಅರಸಬೇಕಾಗಿದೆ. ಸಂಭಾವ್ಯವಾದ ಒಂದು ಮೂಲವನ್ನು ಇಲ್ಲಿ ವಿಚಾರ ಮಾಡಬಹುದು.

'ಕುಂದ' ಎನ್ನುವುದಕ್ಕೆ 'ಮರಳ ದಿಣ್ಣೆ' ಎಂಬ ಅರ್ಥ ಇದೆ. ಕುಂದಾಪುರ ಗಂಗಾವಳಿ ನದಿ ಸಮೂಹ ಸಮುದ್ರ ಸೇರುವ ಅಳಿವೆ ಬಾಯಲ್ಲಿದೆ. ಇವರ ಪ್ರಭಾವದಿಂದ ಮರಳ ದಿಣ್ಣೆಯ ರಚನೆ. ಈ ದಿಣ್ಣೆಯ ಮೇಲೆ ಊರೊಂದರ ನಿರ್ಮಾಣ. ಈ ಭೌಗೋಲಿಕ ಹಿನ್ನೆಲೆ ಊರಿಗೆ ಹೆಸರನ್ನು ನೀಡಿದೆ. ನಮ್ಮ ಪ್ರಾಚೀನರು ತಾವು ವಾಸಿಸುತ್ತಿದ್ದ ಪ್ರದೇಶಗಳಿಗೆ ಸಾಮಾನ್ಯವಾಗಿ ಪರಿಸರದ ಪ್ರಾಕೃತಿಕ ಹಿನ್ನೆಲೆಯನ್ನು ಪ್ರತಿಬಿಂಬಿಸುವಂತಹ ಹೆಸರುಗಳನ್ನು ಕೊಡುತ್ತಿದ್ದರು. ಕುಂದಾಪುರ ಅಂತಹ ಒಂದು ಉದಾಹರಣೆ. ಶೀಘ್ರಗತಿಯಲ್ಲಿ ಬೆಳೆಯುತ್ತಿರುವ ಈ ಊರಿನಲ್ಲಿ ಈಗ ಯಾವುದೇ ಕುರುಹು ದೊರೆಯದಿರಬಹುದು. ಪ್ರಾಚೀನರ ವೃಷ್ಟಿಯಲ್ಲಿ ಮಾತ್ರ ಇದು 'ಕುಂದ' ದ (ಮರಳ ದಿಣ್ಣೆಯ) ಪುರ. ಹಾಗಾಗಿ ಕುಂದಾಪುರ.

**ಕುಂದಗ್ರಾಮ-ಕುಂದಾಪುರ :**

ಮೊದಲಿಗೆ ಇದರ ಹೆಸರು 'ಕುಂದಗ್ರಾಮ' ಎಂದೇ ಇದ್ದಿರಬಹುದು. ಕಡಲತಡಿಯ ಈ ಊರು ಕ್ರಮೇಣ ಆರ್ಥಿಕಮುನ್ನಡೆ ಸಾಧಿಸಿತು. ಇದು ಸಾಮಾಜಿಕ ಅಭಿವೃದ್ಧಿಗೂ ಚಾಲನೆ ಕೊಟ್ಟಿತು. ತತ್ಫಲವಾಗಿ 'ಗ್ರಾಮ' 'ಪುರ' ವಾಯಿತು. ಇದಕ್ಕೊಂದು ಶಾಸನೋಕ್ತ ಉದಾಹರಣೆ ಕೊಡಬಹುದು.

ಕ್ರಿ. ಶ. 1262ಕ್ಕೆ ಸಲುವ ಶಾಸನವೊಂದು ಈ ಊರನ್ನು 'ಕುಂದಾಪುರ ಗ್ರಾಮ' ಎಂದು ಹೆಸರಿಸಿದೆ. ಈ ಗ್ರಾಮ ವರ್ಷವೊಂದಕ್ಕೆ ತೆರುವ ಸಮುದಾಯ ಗದ್ಯಾಣ ನೂರನಲ್ವತ್ತು ಎಂದು ನಿರ್ಧರಿಸಿದುದನ್ನು ಇದು ತಿಳಿಸುತ್ತದೆ. ಆಳುಪರಾಜ ವೀರಪಾಂಡ್ಯದೇವನು ಬಾರಕೂರ ತನ್ನ ಅರಮನೆಯಲ್ಲಿ ಮಂತ್ರಿ ಅಧಿಕಾರಿಗಳ ಸಮ್ಮುಖದಲ್ಲಿ ಈ ನಿರ್ಧಾರ ಕೈಗೊಂಡನು. ಇದಕ್ಕೆ ಅರಸು, ಪ್ರಧಾನಿ, ಅಧಿಕಾರಿ, ಗ್ರಾಮಪಣ್ಣೆಗಳಾದಿಯಾಗಿ ಯಾರೊಬ್ಬರೂ 'ಇಲ್ಲ' ಎನ್ನಬಾರದೆಂಬ ಕಟ್ಟಳೆ ಮಾಡಲಾಗಿತ್ತು. ಈ ನಿರ್ಧಾರ ತೆರಿಗೆಯ ಏರಿಕೆಯನ್ನು ಸ್ಪಷ್ಟೀಕರಿಸುತ್ತದೆಯೆ ಹೊರತು ಕಡಿತವನ್ನಲ್ಲ. ಅಂದಮೇಲೆ 'ಕುಂದಗ್ರಾಮ' 'ಕುಂದಾಪುರ'ವಾಗಿ ಆರ್ಥಿಕಮುನ್ನಡೆ ಸಾಧಿಸಿತ್ತು ಎಂಬುದು ಇದರ ಅರ್ಥ.

**ಮಹಿಳೆಯ ಅಧಿಕಾರ:**

ಸಮುದಾಯ ಗದ್ಯಾಣವನ್ನು ನಿರ್ಧರಿಸುವಾಗ ಕುಂದಾಪುರವನ್ನು ಹಲವು ಪ್ರಮುಖರು ಪ್ರತಿನಿಧಿಸಿದ್ದರು. ಅವರು ಯಾರೆಂದರೆ ಲಖೆಯ ಸೇನಬೋವ, ಅಧಿಕಾರಿತಿ ನಾಚಿಯುಂ (ನಾಚಮ್ಮ) ಮತ್ತು ದೇಸಿಪುರುಷರು. ಒಬ್ಬ ಮಹಿಳೆ ಇಲ್ಲಿ ಅಧಿಕಾರ ನಡೆಸಿದ್ದಳೆನ್ನುವುದು ಒಂದು ಗಮನಾರ್ಹ ಸಂಗತಿ. ದೇಸಿಪುರುಷರು ಎಂದರೆ ಧರ್ಮಗುರುಗಳು. ಹದಿಮೂರನೆಯ ಶತಮಾನದ ವೇಳೆಗೆ ಈ ಎಲ್ಲ ವ್ಯವಸ್ಥೆಗಳನ್ನು ಹೊಂದಿದ್ದ ಊರಾಗಿತ್ತು, ಕುಂದಾಪುರ. ಇದರ ಕೇಂದ್ರ ಬಿಂದು ಕುಂದೇಶ್ವರ ದೇವಾಲಯ.

ನಾಚಿ (ನಾಚಮ್ಮ) ಕುಂದಾಪುರದ ಪ್ರಮುಖ ಮಹಿಳೆ ಇರಬೇಕು. ಹಾಗಾಗಿ ಈಕೆಯನ್ನೆ ಆಳುಪರಾಜ ಇಲ್ಲಿಯ ಅಧಿಕಾರಿಯನ್ನಾಗಿ ಮಾಡಿದ. ವೃತ್ತಿಪ್ರಮುಖರು ಆಡಳಿತಾಧಿಕಾರಿಗಳಾದ ಉದಾಹರಣೆ ಹಲವಾರು ಇವೆ. ಆದರೆ ಕುಂದಾಪುರದ ಮಹಿಳೆ ನಾಚಿಯ ವೃತ್ತಿ ಯಾವುದೆಂದು ತಿಳಿಯುವುದಿಲ್ಲ.

'ಕುಂದ' ಎಂದರೆ ಒಂದು ಜಾತಿಯ ಮಲ್ಲಿಗೆ, ಮೊಲ್ಲೆ, ಕೋಲು, ಮಲ್ಲಿಗೆ ಎಂಬ ಅರ್ಥಗಳೂ ಇವೆ. (ಸಂಕ್ಷಿಪ್ತ ಕನ್ನಡ ನಿಘಂಟು: ಪು: 212)

ಶಿವಮೊಗ್ಗ ಮತ್ತು ಮಂಗಳೂರು ಮಾರುಕಟ್ಟೆಗಳಲ್ಲಿ ವಿಶೇಷವಾಗಿ 'ಕುಂದಾಪುರ ಮಲ್ಲಿಗೆ' ಎಂದೇ ಕರೆಯುವ ಮಲ್ಲಿಗೆಯನ್ನು ಮಾರಾಟ ಮಾಡುತ್ತಾರೆ. ಕುಂದೇಶ್ವರ ದೇವಾಲಯದ ಸುತ್ತಮುತ್ತ ಮಲ್ಲಿಗೆ ತೋಟಗಳಿವೆ, ಇಲ್ಲಿ ವ್ಯಾಪಾರಕ್ಕಾಗಿಯೇ ಮಲ್ಲಿಗೆಯನ್ನು ಬೆಳೆಯುತ್ತಾರೆ. 'ಕುಂದಾಪುರ ಮಲ್ಲಿಗೆ' ಎಂದೇ ಪರಊರುಗಳಲ್ಲಿ ಪ್ರಸಿದ್ಧವಾಗಿರಬೇಕಾದರೆ ಅದಕ್ಕೆ ಸ್ವಲ್ಪವಾದರೂ ವಿಶೇಷತೆ ಇರಬೇಕು. ಬಹಳ ಹಿಂದಿನ ಕಾಲದಿಂದ ನಡೆದು ಬಂದ ಕೃಷಿ ಇದಾಗಿರಬೇಕು. ಆದರೆ ಅಧಿಕಾರಿತಿ ನಾಟಿ ಹೂ ಬೆಳೆಯುವವರ ಪ್ರಮುಖ ಳಾಗಿದ್ದಳೆಂದು ಹೇಳಲು ಸಾಧ್ಯವಿಲ್ಲ. ಸದ್ಯಕ್ಕಂತೂ ಇದಕ್ಕೆ ಆಧಾರದ ಕೊರತೆ ಇದೆ. ಅಂತೆಯೆ ಮಲ್ಲಿಗೆಯಿಂದ ಊರಿಗೆ ಹೆಸರು ಬಂದಿರಬಹುದೆಂದು ಹೇಳಲೂ ಸಾಧ್ಯವಿಲ್ಲ.

## ಕುಂದೇಶ್ವರದ ಬೆಳವಣಿಗೆ:

ಕಡಲ ತಡಿಯ ಮಳಲದಿಣ್ಣೆ ಮೇಲೆ ಬೆಳೆದ ಊರು ಕುಂದಾಪುರ. ಧಾರ್ಮಿಕ ನಂಬಿಕೆ ಮತ್ತು ಆಚರಣೆಯ ಪ್ರತೀಕವಾಗಿ ಜನಸಾಮಾನ್ಯರಿಂದ ಇಲ್ಲಿ ಒಂದು ಶಿವಾಲಯ ನಿರ್ಮಾಣ. ಇದು ಕುಂದೇಶ್ವರ ಆಯಿತು. ಆಳುವ ರಾಜ ಒಡನೆಯ ಆಳುಪರಸನ ಕಾಲದಿಂದ ಈ ಊರು ಹಾಗೂ ದೇವಾಲಯಗಳ ಮುನ್ನಡೆ.

## ಪ್ರಥಮ ಶಾಸನ:

ಕುಂದೇಶ್ವರ ದೇವಾಲಯದಲ್ಲಿ ದೊರಕುವ ಅತ್ಯಂತ ಪ್ರಾಚೀನತಮ ಶಾಸನ ಕ್ರಿ.ಶ. 12[illegible]ರ ಸಮಯದ ಆಳುಪರಾಜ ವೀರಪಾಂಡ್ಯನದು. ಇದರ ಪ್ರಾಮುಖ್ಯತೆಯನ್ನು ಹೀಗೆ ಚರ್ಚಿಸಲಾಗಿದೆ. ಇದು ಪ್ರಸ್ತುತ ಈ ಊರಿನಲ್ಲಿ ದೊರಕಿರುವ ಅತ್ಯಂತ ಪ್ರಾಚೀನ ಶಾಸನವೂ ಹೌದು. ಇಲ್ಲಿ ದೇವಾಲಯವನ್ನು ನೇರ ಪ್ರಸ್ತಾಪಿಸಿಲ್ಲ. ಆದರೂ ದೊರಕಿರುವ ಸ್ಥಳ ದೇವಾಲಯ. ಬಾರಕೂರ ರಾಜಸಭೆಯಲ್ಲಿ ಕುಂದಾಪುರ ಗ್ರಾಮದ ಬಗ್ಗೆ ತೆರಿಗೆಯ ಹಣ ನಿರ್ಧಾರವಾದ ವಿಚಾರ ಎಲ್ಲರಿಗೂ ತಿಳಿಯಲಿ ಎಂದು ಶಾಸನವನ್ನು ಈ ದೇವಾಲಯದಲ್ಲಿ ಹಾಕಲಾಯಿತು. ಇದಕ್ಕಿದ್ದಿರಬಹುದಾದ

ಪ್ರಬಲ ಕಾರಣವೆಂದರೆ ಕುಂದೇಶ್ವರ ದೇವಾಲಯ ಆವೇಳೆಗೆ ಊರಿನ ಮುಖ್ಯ ಧಾರ್ಮಿಕ ಮತ್ತು ಸಾಮಾಜಿಕ ಕೇಂದ್ರವಾಗಿ ಬೆಳೆದದ್ದು.

**ಎರಡನೆಯ ಶಾಸನ:**

ಕುಂದೇಶ್ವರ ದೇವಾಲಯದ ಸಮೀಪ ಗದ್ದೆಯಲ್ಲೊಂದು ಶಿಲಾಶಾಸನ ದೊರೆತಿದೆ. ತುಂಬಾ ಅಳಿಸಿ ಹಾಳಾಗಿರುವ ಈ ಶಾಸನದ ಮೊದಲಭಾಗ ತುಂಡಾಗಿ ಅರ್ಧಕ್ಕೂ ಕಳೆದು ಹೋಗಿದೆ. ಅಳಿದುಳಿದ ಭಾಗದಿಂದ ಇದೊಂದು ದಾನಶಾಸನವೆಂದು ಗೊತ್ತಾಗುತ್ತದೆ. ಕುಂದೇಶ್ವರ ದೇವಾಲಯದಲ್ಲಿ ಪೂಜಾ ಕಾರ್ಯಗಳ ವಿನಿಯೋಗಕ್ಕಾಗಿ ಮತ್ತು ಬ್ರಾಹ್ಮಣಭೋಜನಕ್ಕಾಗಿ ಮಲ್ಲಪ್ಪ ಒಡೆಯನು ಭೂಮಿ ಮತ್ತು ಹೊನ್ನು 1200 ಗದ್ಯಾಣಗಳನ್ನು ದೇವಾಲಯಕ್ಕೆ ದಾನ ಮಾಡಿದ ವಿಚಾರ ಇರದಲ್ಲಿದೆ. ಈ ಭೂಮಿ ಮತ್ತು ಹಣವನ್ನು ಮುಕ್ಕಣ್ಣ ಉಡುಪನ ಸೇವಾಕರ್ತವ್ಯಕ್ಕೆ ಒಪ್ಪಿಸಲಾಯಿತು. ಭೂಮಿಯ ಆದಾಯ ಮತ್ತು ಹಣದ ಬಡ್ಡಿಯನ್ನು ಕಾಲ-ಕಾಲಕ್ಕೆ ದೇವಾಲಯಕ್ಕೆ ಒಪ್ಪಿಸಿ, ಪೂಜಾಕಾರ್ಯಗಳು ಕ್ರಮಪ್ರಕಾರ ನಡೆಯುವಂತೆ ನೋಡಿಕೊಳ್ಳುವ ಜವಾಬ್ದಾರಿ ಈತನದಾಯಿತು.

ಕುಂದೇಶ್ವರನಿಗೆ ಹಿಂದೆ ಎಷ್ಟೋ ಮಂದಿ ದಾನ-ಧರ್ಮಗಳನ್ನು ಮಾಡಿದ್ದಿರಬಹುದು. ಅವುಗಳಿಗೆ ಇದ್ದಿರಬಹುದಾದ ದಾಖಲೆಗಳಾವುವೂ ಈಗ ಲಭ್ಯವಿಲ್ಲ. (ನಮ್ಮ ಹೆಚ್ಚಿನ ದೇವಾಲಯಗಳ ಪರಿಸ್ಥಿತಿಯೇ ಹೀಗೆ) ಸಿಕ್ಕಿರುವ ಈ ಶಾಸನ ಪದ್ಮಕ್ಕಿಂತಲೂ ಪ್ರಥಮ ದಾಖಲೆ. ದುರದೃಷ್ಟವಶಾತ್ ಇದೂ ತ್ರುಟಿತವಾಗಿದೆ. ಲಿಪಿಯ ಆಧಾರದ ಮೇಲೆ ಇದು ಪ್ರಾಯಶಃ ಹದಿನಾಲ್ಕನೆಯ ಶತಮಾನಕ್ಕೆ ಸೇರಿದ್ದೆಂದು ಹೇಳಬಹುದು. ಶಾಸನದಲ್ಲಿ ತಿಳಿಸಿರುವ ಮಲ್ಲಪ್ಪವೊಡೆಯ ಯಾರು ಎಂಬುದು ಗೊತ್ತಾಗುವುದಿಲ್ಲ. ಪ್ರಾಯಶಃ ಈತ ಬಾರಕೂರ ರಾಜ್ಯಪಾಲನಿದ್ದಿರಬಹುದೆಂಬ ಅನುಮಾನ ಬರುತ್ತದೆ. ಕಾರಣ, ಚಕ್ರವರ್ತಿ ಎರಡನೆಯ ಹರಿಹರನ ಮಹಾಪ್ರಧಾನಿ ಮಲ್ಲಪ್ಪವೊಡೆಯನು ಸುಮಾರು ಕ್ರಿ. ಶ. 1385ರಿಂದ 1390ರವರೆಗೆ (ಮಧ್ಯೆ ಸ್ವಲ್ಪ ಕಾಲ ಬಿಟ್ಟು) ಮತ್ತು 1395ರಿಂದ 1396ರವರೆಗೆ ಬಾರಕೂರ

ರಾಜ್ಯಪಾಲನಾಗಿ ಆಡಳಿತನಡೆಸಿದ್ದ. (ಎ ಎಚ್ ಎಸ್ ಕೆ. ಪು. 155, 157-58)

ಒಟ್ಟಿನಲ್ಲಿ ಹದಿನಾಲ್ಕನೆಯ ಶತಮಾನದವೇಳೆಗೆ ಕುಂದೇಶ್ವರ ಭೂಮಿ-ಕಾಣಿಕೆಯನ್ನು ಪಡೆದು ಸಂಪದ್ಭರಿತವಾಗಿ ಜನರನ್ನು ಆಕರ್ಷಿಸಿತ್ತು. ಯಥೇಚ್ಛವಾಗಿ ಪೂಜೆ ಮತ್ತು ಸೇವಾಕಾರ್ಯಗಳು ಇಲ್ಲಿ ನಡೆದಿದ್ದುವು.

## ಕುಂದೇಶ್ವರ ಪಾಶುಪತರ ಕೊಡುಗೆಯೆ ?

ಕುಂದೇಶ್ವರ ದೇವಾಲಯ ಪಾಶುಪತರ ಕೊಡುಗೆಯೂ ಇರಬಹುದು. ಏಳು-ಎಂಟನೆಯ ಶತಮಾನಗಳ ವೇಳೆಗೆ ಜಿಲ್ಲೆಯು ಈ ಶೈವಪಂಥೀಯರಿಂದ ತುಂಬಿತ್ತು. ಅನಂತರದಲ್ಲಿ ನಾಥಪಂಥವೂ ಇಲ್ಲಿ ನೆಲೆಯೂರಿತು. ಕದರಿ (ಮಂಗಳೂರು) ನಾಥಪಂಥದ ಕೇಂದ್ರವಾಯಿತು. ಧ್ವಜೇಶ್ವರವೆಂದೇ ಪ್ರಸಿದ್ಧವಾದ ಕೋಟೇಶ್ವರವು ಪಾಶುಪತರ ಒಂದು ಮುಖ್ಯಸ್ಥಳವಾಯಿತು. ಶಿವಮೊಗ್ಗ ಜಿಲ್ಲೆಯ ಪ್ರಖ್ಯಾತ ಕುಪ್ಪಟೂರು ಇವರ ಕೇಂದ್ರಸ್ಥಾನ. ಶಿವಮೊಗ್ಗ (ಜಿಲ್ಲೆ) ದೊಂದಿಗೆ ಕುಂದಾಪುರದ(ತಾಲ್ಲೂಕಿನ) ಸಖ್ಯ, ಸಂಪರ್ಕ ಅನಾದಿಕಾಲದಿಂದ. ಹಾಗಾಗಿ ಪಾಶುಪತರ ನಿರಂತರ ವಲಸೆ. ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪ್ರಭಾವೀ ವಲಯಗಳಲ್ಲಿ ಇದ್ದರ ಸ್ಪರ್ಧೆ. ಶೈವರಾದ ಆಳುಪರಾಜರಿಗೆ 'ಪಾಶುಪತರ ದ್ರೋಹಿ' ಎಂಬ ಅಭಿಧಾನವೂ ಇತ್ತು. ಆಳುಪರ ಪ್ರಾಚೀನ ಶಾಸನಗಳಿಂದ ಇದು ವ್ಯಕ್ತವಾಗುತ್ತದೆ.

ಕೋಟೇಶ್ವರಕ್ಕೆ ಹತ್ತಿರದಲ್ಲಿರುವ ಕುಂದಾಪುರ [illegible] ಅಲ್ಲದೆ ಪ್ರಮುಖ ವ್ಯಾಪಾರಕೇಂದ್ರ [illegible] ಬಂದರು ನಗರವಾದ ಬಸರೂರು ಮತ್ತು [illegible] (ಆಗಿನ [illegible])ಗಳೊಂದಿಗೆ ನೇರ ಸಂಪರ್ಕ. ಉತ್ತರ-ದಕ್ಷಿಣ ತಿರುಗಾಟಕ್ಕೆ ಇದ್ದೊಂದು ತಂಗುದಾಣ. ಹಾಗಾಗಿ ಪಾಶುಪತರ ನೇರ ಸಂಪರ್ಕಕ್ಕೆ [illegible] ಇದರಿಂದಾಗಿ ಕೋಟೇಶ್ವರನಿಗೂ ಕುಂದೇಶ್ವರನಿಗೂ ಸಂಬಂಧ ಸೃಷ್ಟಿ. ಈ ವಿಚಾರಕ್ಕೆ ಸಂಬಂಧಿಸಿದಂತೆ ಶಾಸನವೊಂದನ್ನು ಇಲ್ಲಿ ಅವಲೋಕಿಸಬಹುದು.

ಕುಂದಾಪುರ ಸಮೀಪ ವಡೇರ ಹೋಬಳಿಯ ಬರಹದ ಕಲ್ಲುಗುಡ್ಡೆಯಲ್ಲಿ ಶಾಸನವೊಂದು ದೊರಕಿದೆ. ಇದರ ಕಾಲ ಕ್ರಿ. ಶ. 1406. ಪ್ರಸ್ತುತ ಕುಂದಾಪುರ ಮತ್ತು ಕುಂದೇಶ್ವರನಿಗೆ ಸಂಬಂಧಿಸಿದಂತೆ ದೊರೆಯುವ ಮೂರನೆಯ ಪ್ರಾಚೀನ ಶಾಸನ ಇದು. ಕೋಟೇಶ್ವರನಿಗೂ, ಕುಂದೇಶ್ವರನಿಗೂ ಒಟ್ಟಿಗೆ ಮಾಡಿದ ದಾನದ ಉಲ್ಲೇಖ ಇದರಲ್ಲಿದೆ. ಕೋಟೇಶ್ವರನಿಗೆ ಮೂರು ಮುಡಿ ಭತ್ತ, ಕುಂದೇಶ್ವರನಿಗೆ ಅರವತ್ತು ಹಾನೆ ಅಕ್ಕಿ ವರ್ಷಂಪ್ರತಿ ದೊರೆಯುವಂತಹ ಭೂಮಿಯನ್ನು 'ಹಂಗರು ಅಧಿವಾಸ'ದ ಇಬ್ಬರು ದಣಿಗಳು ಮತ್ತು ಇಬ್ಬರು ಭಟ್ಟರೂ ಕೂಡಿ ಶೃಂಗೇರಿ ಶ್ರೀ ಶಾರದಾ ಪೀಠದ ಆಗಿನ ಜಗದ್ಗುರು ಶ್ರೀ ನರಸಿಂಹಭಾರತೀ ವೊಡೆಯರಿಗೆ ಮೂಲಕ್ರಯದಾನ ಮಾಡಿದರು. ಜಮೀನಿನ ವಿಸ್ತೀರ್ಣವನ್ನು ಬಿತ್ತುವ ಬೀಜವರಿಯಿಂದ ತಿಳಿಸುವುದು ಸಾಮಾನ್ಯ ರೂಢಿ. ಆದರೆ ಇಲ್ಲಿ ಆ ವಿಚಾರವೇ ಇಲ್ಲ. ಬರಿಯ ಚತುಸ್ಸೀಮೆಯ ಗಡಿವಿವರಗಳನ್ನಷ್ಟೆ ಕೊಟ್ಟಿದೆ. ಶೃಂಗೇರಿ ಮಠದ ಪಾರುಪತ್ತೆಗೆ ಬಂದ ಈ ಭೂಮಿ ಸಾಕಷ್ಟು ವಿಸ್ತೀರ್ಣ ಉಳ್ಳದ್ದಿರಬಹುದೆಂದಷ್ಟೆ ಊಹಿಸಬಹುದು.

ಇದೊಂದು 'ಬ್ರಹ್ಮಾದಾಯ'ದ ಭೂಮಿ. ದಾನಿಗಳ ವಂಶಸ್ಥರುಗಳಿಗೆ ಪರಂಪರೆಗತವಾಗಿ ಬಂದದ್ದು. ಹಾಗಾಗಿ 'ಸ್ತ್ರೀಪುತ್ರಕಾದಿ ದಾಯಾದ್ಯ ಸಾಮಂತರು' ಗಳಿಗೆಲ್ಲ ಇದರ ಮೇಲೆ ಹಕ್ಕು. ಈ ಅಭಿಪ್ರಾಯ ಮೂಡುವಂತಹ ವಕ್ಕಣೆ ಶಾಸನದಲ್ಲಿದೆ. ಈ ಕಾರಣ ದಾನಿಗಳು ಮೂಲಕ್ರಯಗೊಟ್ಟು ಭೂಮಿಯನ್ನು ತಮ್ಮ ಸ್ವಾಧೀನ ಪಡೆದರು. ಅನಂತರ ಶೃಂಗೇರಿಯ ಶ್ರೀ ಜಗದ್ಗುರು ಮಹಾಸಂಸ್ಥಾನದ ನರಸಿಂಹ ಭಾರತೀ ವೊಡೆಯರಿಗೆ ಎರಡೂ ದೇವಾಲಯಗಳ ವಿನಿಯೋಗಾರ್ಥ ದಾನ ಮಾಡಿದರು. ದಾನ ಮಾಡಿದ ಭೂಮಿಯನ್ನು 'ಸರ್ವಮಾನ್ಯ' (ತೆರಿಗೆ ರಹಿತ) ಮಾಡಲಾಯಿತು.

ಈ ಕ್ರಯದಾನದಿಂದಾಗಿ ಮೂಲಗೇಣಿ ಒಡೆತನ ಶೃಂಗೇರಿಮಠಕ್ಕೆ ಸೇರಿತು. ಆದರೆ ಪಡೆದುಕೊಂಡ ಭೂಮಿಯನ್ನು ಬೇಸಾಯಕ್ಕೋಸ್ಕರ ಚಾಲ್ತಿ ಆಸಾಮಿಗೂ ಕೊಟ್ಟಂತೆ ಶಾಸನದಲ್ಲಿ ಕಂಡುಬರುವುದಿಲ್ಲ. ಶಾಸನದ ಕೊನೆಯ ಸಾಲುಗಳು ನಷ್ಟವಾಗಿದ್ದು ಪ್ರಾಯಶಃ ಅದರಲ್ಲಿ ಇದರ ಮಾಹಿತಿ ಇದ್ದಿರಬಹುದು. ಹಳೆಯ ವ್ಯವಸ್ಥೆಯನ್ನೇ ಮುಂದುವರಿಸಿರಲೂ ಬಹುದು. ಒಟ್ಟಿನಲ್ಲಿ 'ಕೋಟೇಶ್ವರ ದೇವರಿಗೆ ನಾಡ ಹಾನೆಯಲು ನಾಗಂಡುಗದಲು

ಮೂರು ಮುಂಡೆ ಛತ್ರ ಚಿಕ್ಕದೇವರಿಗೆ ಆಸಾಡಿ ಸೋನೆಗೆ ರುದ್ರಪೂಜೆಗೆ ಅರವತ್ತುಹಾನೆ ಅಕ್ಕಿ ಕೊಟ್ಟು ಸುಖದಲು ಭೋಗಿಸುವಂತಾಗಿ ಕೊಟ್ಟ ಶಾಸನ' ಇದು.

ಮೂಲಕ್ರಯದಾನ ಮಾಡಿದ ಬ್ರಹ್ಮಾದಾಯ ಭೂಮಿ ದಾನಿಗಳಿಗೆ ವಂಶಪಾರಂಪರ್ಯವಾಗಿ ಬಂದದ್ದು ಎಂದು ಮೇಲೆ ಹೇಳಿದೆ. ಇದನ್ನು ಎರಡೂ ದೇವಾಲಯುಗಳ ವಿನಿಯೋಗಾರ್ಥದಾನಮಾಡಿ ಅದರ ಹಕ್ಕನ್ನು ಶೃಂಗೇರಿಮಠಕ್ಕೆ ಒಪ್ಪಿಸಲಾಯಿತು. ಅಂದಮೇಲೆ ದಾನ ಮಾಡಿದ ಬ್ರಾಹ್ಮಣರು ಶೃಂಗೇರಿಮಠದ ಶಿಷ್ಯರು. ಅವರಿಗೆ ಈ ದೇವಾಲಯುಗಳೊಂದಿಗೆ ಸಂಪರ್ಕ ಇತ್ತು. ಕೋಟೀಶ್ವರ ಇವರ ಪ್ರಮುಖ ದೇವರಾದರೆ ಕುಂದೇಶ್ವರನಿಗೆ ನಂತರದ ಸ್ಥಾನ. ಶಾಸನದಲ್ಲಿ 'ಕುಂದೇಶ್ವರ ದೇವರು ಚಿಕದೇವರು' ಎಂದು ಒಂದು ಕಡೆ ಹೇಳಿದೆ. ಹಾಗೆಯೇ "......ಒಪ್ಪ ಕುಂದೇಶ್ವರ ದೇವರು ಕೋಟಿನಾಥ ದೇವರು....' ಎಂದೂ ತಿಳಿಸಿದೆ.

ಪಾಶುಪತರು ಎರಡೂ ದೇವಾಲಯುಗಳ ನಿರ್ಮಾಣಕ್ಕೆ ಕಾರಣರಿರ ಬಹುದೆಂದು ಮೇಲೆ ಹೇಳಿದೆ. ಹಾಗಾಗಿ ಎರಡಕ್ಕೂ ಸಂಬಂಧ. ಈ ಶಾಸನ ದಲ್ಲಿ ಎರಡೂ ದೇವರನ್ನು ಒಟ್ಟಿಗೆ ಸೇರಿಸಿ ಅವುಗಳಿಗೆ ದಾನ ಕೊಟ್ಟಿರುವುದು. ಈ ವಿಚಾರವನ್ನು ಪುಷ್ಟೀಕರಿಸುತ್ತದೆ. ಕೋಟೀಶ್ವರ ಇವರ ದೊಡ್ಡ ದೇವರು. ಆ ಕಾರಣದಿಂದ ಕುಂದೇಶ್ವರನನ್ನು ಚಿಕ್ಕದೇವರೆಂದು ಸಂಬೋಧಿಸಿರುವುದು.

ಈ ದಾನಶಾಸನಕ್ಕೆ ಸಾಕ್ಷಿಗಳಾಗಿ ಇನ್ನೆರಡು ದೇವರುಗಳು ಸೂಚಿಸಲ್ಪಟ್ಟಿವೆ. ಅವುಗಳು 'ಬೆಟ್ಟದೇವರು ಮತ್ತು ಚಿಕ್ಕದೇವರ ಪಾಲಕಾರರ ಊರ ಚಿಕದೇವರು.ಸಿ' ಬೆಟ್ಟದೇವರು ಆನೆಗುಡ್ಡೆ ಗಣಪತಿ ಇರಬಹುದೇ ಎಂಬ ಅನುಮಾನ ಬರುತ್ತದೆ (ಶೃಂಗೇರಿಯ ಮಲ್ಲಿಕಾರ್ಜುನನಿಗೆ(ಮಲಹಾನಿಕರೇಶ್ವರ) ಬೆಟ್ಟದೇವರು ಎಂಬ ಹೆಸರಿದೆ. ಶೃಂಗೇರಿಗೂ ಕುಂದೇಶ್ವರನಿಗೂ ಸಂಬಂಧ ಇದ್ದ ಕಾರಣ ಶಾಸನದ ಬೆಟ್ಟದೇವರು ಶೃಂಗೇರಿಯ ಬೆಟ್ಟದೇವರಿರ ಬಹುದೆ ?) ಆದರೆ ಈ ಪಾಲಕಾರರ ಊರು ಯಾವುದು ಎಂಬುದು ಮಾತ್ರ ಗೊತ್ತಾಗುವುದಿಲ್ಲ.

ಈ ಸಂದರ್ಭದಲ್ಲಿ ಶಾಸನದಲ್ಲಿರುವ ಇನ್ನೊಂದು ಮುಖ್ಯಅಂಶವನ್ನು ಗಮನಿಸುವುದು ಸೂಕ್ತ. ಸರ್ವಮಾನ್ಯವಾಗಿ ಭೂಮಿಯ ಮೂಲಕ್ರಯ ದಾನವನ್ನು ಕೊಟ್ಟುದು ಶೃಂಗೇರಿಯ ಗುರುಗಳಾದ ಶ್ರೀನರಸಿಂಹ ಭಾರತೀ ವೊಡೆಯರಿಗೆ. ಇವರ ಗುರುಸ್ತುತಿ ಮತ್ತು ಪರಂಪರೆಯನ್ನು ಶಾಸನಾರಂಭದಲ್ಲಿ ಕೊಡಲಾಗಿದೆ. ವಿದ್ಯಾತೀರ್ಥ, ವಿದ್ಯಾರಣ್ಯ ಮತ್ತು ಭಾರತೀತೀರ್ಥರನ್ನು ಇಲ್ಲಿ ಸ್ತುತಿಸಲಾಗಿದೆ. ಅನಂತರ ನರಸಿಂಹಭಾರತೀ ವೊಡೆಯರ ಉಲ್ಲೇಖ. ವಿದ್ಯಾತೀರ್ಥರು ಶೃಂಗೇರಿ ಸಂಸ್ಥಾನದ ಪುನರುತ್ಥಾನಕ್ಕೆ ಕಾರಣೀಭೂತರು. ಇದುವರೆವಿಗೂ ತಿಳಿದಿರುವಂತೆ ಭಾರತೀತೀರ್ಥರು ವಿದ್ಯಾತೀರ್ಥರ ನಂತರ ಗುರುಪೀಠಕ್ಕೆ ಬಂದರು. ಅವರ ನಂತರ ವಿದ್ಯಾರಣ್ಯರು. ಆದರೆ ಇಲ್ಲಿ ಭಾರತೀತೀರ್ಥರು ವಿದ್ಯಾರಣ್ಯರ ನಂತರ ಉಲ್ಲೇಖಿಸಲ್ಪಟ್ಟಿದ್ದಾರೆ. ಈ ವ್ಯತ್ಯಾಸದ ಚರ್ಚೆ ಇಲ್ಲಿ ಅಪ್ರಸ್ತುತ. ಆದರೆ ಗಮನಿಸಬೇಕಾದ ಒಂದು ಮುಖ್ಯ ಅಂಶ.

ನರಸಿಂಹ ಭಾರತೀವೊಡೆಯರು ಈ ಬ್ರಹ್ಮಾದಾಯದ 'ಮೂಲಕ್ರಯ ದಾನ' ವನ್ನು ವಾಸ್ತೇವ (ವಾಸುದೇವ) ವೈಯಿದ್ಯ, ನಾರಣ ವೈಯಿದ್ಯ ಮುಖ್ಯ ವಿಷ್ಣುಸಭಾಯುತನ ಮಕ್ಕಳಾದ ಫೇರಾಳ ಸಭಾಯಿತರಿಂದ ಪಡೆದರು. ಆ ಸಮಯದಲ್ಲಿ ಚಕ್ರವರ್ತಿ ಇಮ್ಮಡಿ ಬುಕ್ಕರಾಯ ವಿಜಯನಗರ ಸಾಮ್ರಾಜ್ಯ ವನ್ನು ಆಳುತ್ತಿದ್ದ. ಈತನ ನಿರೂಪದಿಂದ ರಾಜ್ಯಪಾಲ ಬಾಚಣವೊಡೆಯ ಬಾಕಕೂರು ರಾಜ್ಯವನ್ನಾಳುತ್ತಿದ್ದ. (ಶೃಂಗೇರಿಯ ಪೀಠಾಧಿಪತಿಗಳಾದ ಶ್ರೀ ನರಸಿಂಹ ಭಾರತೀ ವೊಡೆಯರ ಉಲ್ಲೇಖ ಬಸರೂರಿನ ಕ್ರಿ. ಶ. 1400ರ (ಶಾಸನವೊಂದರಲ್ಲೂ ಇದೆ.)

ಕುಂದೇಶ್ವರ ದೇವರಿಗೆ ಹಿಂದೆ ಎಷ್ಟೋಮಂದಿ ಮಾಡಿದ ದಾನ, ಧರ್ಮಗಳಿಗೆ ಇದ್ದಿರಬಹುದಾದ ದಾಖಲೆಗಳು ಈಗ ಕಂಡುಬರುವುದಿಲ್ಲ ಎಂದು ಮೇಲೆ ಹೇಳಿದೆ. ಈ ಅನುಮಾನಕ್ಕೆ ಪುಷ್ಟಿಕೊಡುವ ಆಧಾರ ಕುಂದೇಶ್ವರ ದೇವಾಲಯದಲ್ಲೇ ಇದೆ. ಇದೊಂದು ದೀರ್ಘವಾದ ಶಿಲಾಶಾಸನ. ಎರಡೂ ಬದಿಯಲ್ಲಿ ಬರಹ ಇದೆ. ಆದರೆ ಭಾಗಶಃ ಹಾಳಾಗಿದೆ. ಮೊದಲು ಶಾಸನದ ಕೆಲವು ಸಾಲುಗಳನ್ನು ಮಾತ್ರ ಓದಲಾಗಿತ್ತು; ಪ್ರಸಕ್ತ ಅಧ್ಯಯನಕ್ಕಾಗಿ ಅದನ್ನು ಪೂರ್ಣಗೊಳಿಸಲಾಗಿದೆ. ಚಕ್ರವರ್ತಿ ಒಂದನೆಯ ದೇವರಾಯ

ಮಹಾರಾಯನಿಗೆ ಸೇರಿದ ಈ ಶಾಸನದ ಕಾಲ ಕ್ರಿ. ಶ. 1425. ಆಗ ರಾಜ್ಯ ಪಾಲ ನರಸಿಂಹ ದೇವ ವೊಡೆಯ ಚಕ್ರವರ್ತಿಯ ಆಜ್ಞಾರಾಧಕನಾಗಿ ಬಾರಕೂರು ರಾಜ್ಯದ ಆಡಳಿತ ನಿರ್ವಹಿಸುತ್ತಿದ್ದ.

ಹಿಂದೆ ಕುಂದೇಶ್ವರ ಸನ್ನಿಧಿಯಲ್ಲಿ ಊರು, ಜಗತ್ತು ಕೂಡಿರುವಾಗ ಕುಡಾಕೂರ ದೇವಂಣ ಸೇನ ಬೋವನು ದೇವರ ಸೇವಾಕಾರ್ಯಗಳಿಗಾಗಿ ಭೂಮಿದಾನವನ್ನು ಮಾಡಿದ್ದ. ಆದರೆ ಕಾಲ ಕ್ರಮೇಣ ಈ ಧರ್ಮ ನಡೆಯದೇ ನಿಂತು ಹೋಯಿತು. ವಿಚಾರ ತಿಳಿದ ಬಾರಕೂರು ರಾಜ್ಯಪಾಲ ನರಸಿಂಹದೇವ ವೊಡೆಯನು 'ಕುಂದಾಪುರದ ಗ್ರಾಮ ಜಗತ್ತು, ಮುಕ್ಕಾಲ-ಟ್ಟಿಗಳನು' ಕರೆಸಿ ಆ ಬಗ್ಗೆ ವಿಚಾರಣೆ ನಡೆಸಿದ. ದೇವಂಣ ಸೇನಬೋವ ಮಾಡಿದ ಧರ್ಮ ಏಂತು ಹೋಗಿರುವುದು ಶ್ರುತಪಟ್ಟಿತು. ಕೂಡಲೆ 'ಪುರೋ-ಹಿತಸ್ಥಳ'ವನ್ನು ಆಳಿಸಿ ಕಂದಾಯವನ್ನು ನಿರ್ಧರಿಸಿದನು. ಇದು 'ಅರಮನೆಗೆ ಸಿದ್ಧಾಯ ನಷ್ಟವಿಲ್ಲದೆ' ಇರುವಂತೆ ಮಾಡಲಾಯಿತು. ಅನಂತರ ಆ ಧರ್ಮದ ಭೂಮಿಯನ್ನು ದೇವಾಲಯಕ್ಕೆ ನೀಡಲಾಯಿತು. ಇದು ಶಾಸನ ತಿಳಿಸುವ ಒಂದು ಮುಖ್ಯವಿಚಾರ.

ಪುನರ್ನವೀಕರಿಸಿ ಸ್ಥಿರೀಕರಿಸಲ್ಪಟ್ಟ ಧರ್ಮದಭೂಮಿಯು 'ಪುರೋಹಿತ ಸ್ಥಳ'. ಹಾಗೆಂದು ಶಾಸನ ಹೇಳಿದೆ. ಪ್ರಾಯಶಃ ದೇವಂಣಸೇನಬೋವ ದಾನ ಮಾಡಿದ ಸ್ಥಳ ಇದಾಗಿರಬೇಕು. ಕುಂದೇಶ್ವರ ದೇವಾಲಯದ ಪುರೋಹಿತರ ವಶ ಬಂದ ಮೇಲೆ ಇದು 'ಪುರೋಹಿತ ಸ್ಥಳ' ವೆಂದೇ ಕರೆಯಲ್ಪಟ್ಟಿರಬೇಕು. ಆದರೆ ಇದು ದೇವರ ಪೂಜಾವಿನಿಯೋಗಕ್ಕಾಗಿ ದೇವಾಲಯಕ್ಕೆ ಕೊಟ್ಟಿದ್ದೆ ಹೊರತು ಅಲ್ಲಿ ಪೂಜಾಕಾರ್ಯ ನಡೆಸುತ್ತಿದ್ದ ಪುರೋಹಿತವರ್ಗಕ್ಕಲ್ಲ.

ಬಿಟ್ಟು 117 ಮೂಡೆ ಅಕ್ಕಿ ವರ್ಷಂಪ್ರತಿ ಆದಾಯ ಬರುವ ಭೂಮಿ-ಯನ್ನು ದೇವಾಲಯಕ್ಕೆ ಕೊಡಲಾಯಿತು ಎಂದು ಶಾಸನದಲ್ಲಿ ಹೇಳಿದೆ. ಇದರಲ್ಲಿ ಮೊದಲ ಭಾಗ ವಿಷ್ಣುಕಾರಂತನ ಸೇವಾಕರ್ತವ್ಯಕ್ಕೆ ಬಂತೆಂದು ಕಾಣುತ್ತದೆ. ಈ ಭೂಮಿ ನಾಗಂಡುಗ ಬಿತ್ತುವ ವಿಸ್ತೀರ್ಣದ ಬಯಲು. ಈತ ಎಷ್ಟು ಮುಡಿ ಅಕ್ಕಿ ದೇವಾಲಯಕ್ಕೆ ಕೊಡಬೇಕೆನ್ನುವ ಅಂಶ ಶಾಸನದಲ್ಲಿ ಹಾಳಾಗಿದೆ. ಬಹುಶಃ ಇಪ್ಪತ್ತೇಳು ಮುಡಿ ಇರಬೇಕು.

ಎರಡನೆಯ ಭಾಗದ ಭೂಮಿ ಎರಡುಮುಡಿ ಬಿತ್ತುವ ವಿಸ್ತೀರ್ಣದ್ದು. ಇದನ್ನು ವಿಷ್ಣು ಉಡುಪ ಮತ್ತು ಬಿಂನಾಣಿ ಕೇಶ್ವ (ಕೇಶವ) ಇವರುಗಳ ಅಧೀನ ಬಿಡಲಾಯಿತು. ಈರ್ವರೂ ವರ್ಷಂಪ್ರತಿ ದೇವಾಲಯಕ್ಕೆ ನಾಗಂಡುಗ ಲೆಕ್ಕದ ಒಂಭತ್ತು ಮೂಡೆ ಅಕ್ಕಿ ಗೇಣಿ ಕೊಡುವಂತೆ ನಿರ್ಧರಿಸಲಾಯಿತು. ಅಲ್ಲದೆ ಇವರು 'ವೃಶ್ಚಿಕ ತಿಂಗಳಲ್ಲಿ ದೇವರ ಮುಂದಣ ದೀವಿಗೆಗೆ ನಾಲ್ಕು ಹಣವನು ನಡಸಟಹುದು.' ಅಂದರೆ ಕಾರ್ತಿಕ ಮಾಸದ ದೀಪಾರಾಧನೆಗೆ ಈ ಹಣ.

ಮೂರನೆಯ ಭಾಗದ ಭೂಮಿ ಹತ್ತು ಮೂಡೆ ಬಿತ್ತುವ ಬೀಜವರಿ ಳ್ಳಿಯಾಳು ಥಾಮ ಉಡುಪನ ಹಸ್ತಕ್ಕೆ ಇದನ್ನು ಕೊಡಲಾಯಿತು. ಈತ ದೇವಾಲಯಕ್ಕೆ ವಾರ್ಷಿಕ ಹದಿನೆಂಟು ಮುಡಿ ಅಕ್ಕಿಯನ್ನು ಸಲ್ಲಿಸುವುದೆಂದು ಕಟ್ಟು ಮಾಡಲಾಯಿತು.

## ಹಿರಿಯ ವಿಶ್ವಗಳ ಧರ್ಮ:

ದಾನದ ವಿವರಗಳನ್ನು ತಿಳಿಸುವ ಶಾಸನದ ಮುಂದಿನ ಭಾಗ ಮತ್ತೂ ಪ್ರಾಮುಖ್ಯತೆ ಪಡೆದಿವೆ. ಪ್ರಾಯಶಃ ದೇವಣ ಸೇನಬೋವನ ಕಾಲಕ್ಕೆ ಬಹಳಷ್ಟು ಹಿಂದೆಯೆ ಮಾಡಿದ ಧರ್ಮ ನಡೆಯದೆ ನಿಂತು ಹೋಗಿತ್ತು. ಅದನ್ನು ಆತ ನವೀಕರಿಸಿದ ಎಂದು ಕಂಡುಬರುತ್ತದೆ. 'ಪೂರ್ವದಲಿ ದಿನವೂ ಹಿರ್ಯ ವಿಶ್ವಗಳು ಕುಂದಮಂಗಲದೊಳಗೆ ಆರು ಮಂದಿಯ ಬ್ರಾಹ್ಮಣ ಭೋಜನಕೆ ಬರದು ನಟ್ಟ ಶಾಸನದ ಪ್ರಮಾಣಿಸಲು'-ಎಂದೂ ಈ ಶಾಸನದಲ್ಲಿ ಇದೆ. ಈ ಹಿರಿಯ ವಿಶ್ವಗಳು ತಾವು ಮಾಡಿದ ಧರ್ಮಕ್ಕೆ ಶಾಸನಾಂಕಿತ ಮಾಡಿದ್ದರು. ಈ ಶಾಸನ ಈಗ ಲಭ್ಯವಿಲ್ಲ. ನಿತ್ಯ ಆರು ಮಂದಿ ಬ್ರಾಹ್ಮಣ ಭೋಜನಕ್ಕಾಗಿ ದೇವಾಲಯಕ್ಕೆ ಕೊಟ್ಟದ್ದು ವರ್ಷಂಪ್ರತಿ ಅಕ್ಕಿ ಮೂಡೆ ಐವತ್ತನಾಲ್ಕು.

## ಅಲ್ಲಪ್ಪನ ಧರ್ಮ:

ಇದರೊಂದಿಗೆ ರಾಜ್ಯಪಾಲ ನರಸಿಂಹದೇವ ವೊಡೆಯನು ವಿಚಾರಿಸಿದಾಗ ಕಂಡುಬಂದುದು ಮತ್ತೊಂದು ದಾನದ ವಿಚಾರ. ದೇವಾಲಯದಲ್ಲಿ ಒಬ್ಬ

ಬ್ರಾಹ್ಮಣನ ಭೋಜನಕ್ಕಾಗಿ ಅಲ್ಲಪ್ಪನು ಮಾಡಿದ ಧರ್ಮ. ವರ್ಷಂಪ್ರತಿ ನಡೆದು ಬರುವ ಅಕ್ಕಿ ಮೂಡೆ ಒಂಭತ್ತು ಎರಡೂ ಕೂಡಿ ಅರವತ್ತು ಮೂರು ಮುಡಿ ಅಕ್ಕಿ ವಾರ್ಷಿಕ ಆದಾಯದಲ್ಲಿ ದಿನವಹಿ ಒಟ್ಟು ಏಳು ಜನ ಬ್ರಾಹ್ಮಣರಿಗೆ ಅಶನ ವ್ಯವಸ್ಥೆ ಮಾಡಲಾಗಿತ್ತು. ಇದನ್ನೂ ಸಹ ಊರ್ಜಿತಗೊಳಿಸಲಾಯಿತು.

### ದೇವಣ್ಣ ಸೇನಬೋವನ ಕಾಲ :

ಇಂತಿಷ್ಟು ಧರ್ಮವನ್ನು ಊರು,ಜಗತ್ತು ಕೂಡಿ ದೇವಣ್ಣ ಸೇನಬೋವ ಹಿಂದೆ ಮಾಡಿದ್ದ. ಆದರೆ ಈತ ಯಾವ ಕಾಲದಲ್ಲಿದ್ದ ಎನ್ನುವುದು ತಿಳಿಯುವುದಿಲ್ಲ ಇದೊಂದು ಖೇದದ ಸಂಗತಿ. ಹಿರಿಯ ವಿಪ್ರಗಳು ಹಾಕಿಸಿದ ದಾನಶಾಸನ ಪಾದರೂ ದೊರೆತರೆ ಆಗ ದೇವಣ್ಣ ಸೇನಬೋವನ ಕಾಲವನ್ನು ಸ್ವಲ್ಪವಾದರೂ ನಿರ್ಧರಿಸಬಹುದು.

### ಭಾಸ್ಕರಪ್ಪನ ಕಟ್ಟು :

ಈ ಧರ್ಮಶಾಸನ ಪುನರುತ್ಥಾನಗೊಳ್ಳಲು ಭಾಸ್ಕರಪ್ಪ ಕಾರಣನಿರಬಹುದು. ಈತ ಬಾರಕೂರ ರಾಜ್ಯಪಾಲನಾದ ನರಸಿಂಹದೇವ ಒಡೆಯನಲ್ಲಿ ದೇವಾಲಯದ ಸ್ಥಿತಿ–ಗತಿಗಳನ್ನು ನಿವೇದಿಸಿಕೊಂಡಿರಬೇಕು. ಪ್ರಾಯಶಃ ಈ ಕಾರಣದಿಂದ ರಾಜ್ಯಪಾಲ ವಿಚಾರಣೆ ನಡೆಸಿದ. ಊರು, ಜಗತ್ತು, ಮುಂಕ್ಯಾಳ್ಟಿಗಳ ಸಮ್ಮುಖ ನಡೆದ ಈ ವಿಚಾರಣೆಯಲ್ಲಿ ರಾಜ್ಯಪಾಲನಿಗೆ ಧರ್ಮಶಾಸನ ನಶಿಸಿರುವುದು ದೃಢವಾಯಿತು. ರಾಜ್ಯದ ಆದಾಯ ನಷ್ಟ ಆಗದ ರೀತಿಯಲ್ಲಿ ದೇವಾಲಯಕ್ಕೆ ಹಿಂದೆ ಆಗಿದ್ದ ಭೂದಾನಗಳನ್ನು ಪುನಶ್ಚೇತನಗೊಳಿಸಿದ. ಇದನ್ನು ಶಾಸನಾಂಕಿತ ಮಾಡಿಕೊಟ್ಟು ಅನುಷ್ಠಾನ ಗೊಳಿಸುವಂತೆ ಭಾಸ್ಕರಪ್ಪನಿಗೆ ಅಧಿಕಾರ ನೀಡಿರಬೇಕು. ತತ್ಸಂಬಂಧವಾಗಿ ಭಾಸ್ಕರಪ್ಪ ಒಂದು ಕಟ್ಟಳೆ ಮಾಡಿದ. 'ಭಾಸ್ಕರಪ್ಪಗಳು ಮಾಡಿದ ಧರ್ಮ ಕಟ್ಟಳೆ' ವೆಂಬ ಶಾಸನ ಹೇಳುವುದು ಈ ವಿಚಾರಕ್ಕೆ ಪುಷ್ಟಿಕೊಡುತ್ತದೆ.

ಭಾಸ್ಕರಪ್ಪ ಯಾರೆಂದು ಶಾಸನ ತಿಳಿಸುವುದಿಲ್ಲ. ಪ್ರಾಯಶಃ [illegible] ದೇವಾಲಯದ ಪಾರುಪತ್ಯ ಕಾರ್ಯ ಈತನದಿರಬಹುದು. [illegible] ಈತನ ಪ್ರಯತ್ನದಿಂದ ದೇವಾಲಯಕ್ಕೆ ಪುನಶ್ಚೇತನ. ವರ್ಷಂಪ್ರತಿ

ಒಂದುನೂರ ಹದಿನೇಳು ಮೂಡೆ ಅಕ್ಕಿ ವರಮಾನದ ಲಾಭ. ಇವರ ಫಲವಾಗಿ ದೇವಾಲಯದಲ್ಲಿ ಬಹಳ ಹಿಂದೆ ನಡೆಯುತ್ತಿದ್ದು ಕಾಲಾನಂತರ ನಿಂತು ಹೋಗಿದ್ದ ವ್ರತ, ಪೂಜೆ ಮತ್ತು ಉತ್ಸವಾದಿಗಳ ಜೊತೆಗೆ ಬ್ರಾಹ್ಮಣ ಅಶನ ವ್ಯವಸ್ಥೆ ವಿಧಿವತ್ತಾಗಿ ಪುನಃ ನಡೆಯುವಂತಾಯಿತು. ಸಮಾಜದ ಧಾರ್ಮಿಕ ಆವಶ್ಯಕತೆಗಳನ್ನು ಪೂರೈಸಲು ದೇವಾಲಯವನ್ನು ಪುನಶ್ಚೇತನಗೊಳಿಸಿದ ಇದು ಒಂದು ಸತ್ಕಾರ್ಯ; ಒಂದು ಮಹಾಕಾರ್ಯವೂ ಹೌದು.

ಕುಂದೇಶ್ವರ ದೇವಾಲಯದಲ್ಲಿ ದೊರೆಯುವ ಇನ್ನೊಂದು ಶಾಸನ ಕ್ರಿ. ಶ. 1452ಕ್ಕೆ ಸೇರಿದುದು. ಆಗ ಚಕ್ರವರ್ತಿ ಮಲ್ಲಿಕಾರ್ಜುನ ವಿಜಯ ನಗರ ಸಾಮ್ರಾಜ್ಯವನ್ನಾಳುತ್ತಿದ್ದ. ಇವನ ಆಜ್ಞಾರಾಧಕನಾಗಿ ಬಾರಕೂರು ರಾಜ್ಯವನ್ನಾಳುತ್ತಿದ್ದವ ಮಹಾಪ್ರಧಾನ ವಲ್ಲಭದೇವ ದಣಾಯಕ. ಈ ರಾಜ್ಯ ಪಾಲನು ಚಕ್ರವರ್ತಿ ಮಲ್ಲಿಕಾರ್ಜುನ ರಾಯನ ಪ್ರಾಯಶಃ ಆಯುಷ್ಯಾಭಿವೃದ್ಧಿ ಗಾಗಿ ನಲ್ವತ್ತೆಂಟು ಹೊನ್ನುಗಳನ್ನು ದಾನಮಾಡಿದ. ಕುಂದಾಪುರದ ಉಪ್ಪಿನ ಮುಡಿಗಳಿಂದ ಬರುವ ತೆರಿಗೆ ಮೂಲದ ಹಣದಿಂದ ಈ ದಾನ ಮಾಡಲಾಗಿದೆ. (ದಾನಕ್ಕಾಗಿ ಉಪಯೋಗಿಸುವ ಪದಾರ್ಥಗಳಲ್ಲಿ ಉಪ್ಪು ಒಂದು, ಇಲ್ಲಿ ಉಪ್ಪಿನ ಬದಲು, ಅದರ ಮೇಲಿನ ತೆರಿಗೆಯಿಂದ ಬರುವ ಆದಾಯದ ಹಣವನ್ನು ದಾನಮಾಡಲಾಗಿದೆ, ಅಷ್ಟೆ) ಇದರೊಂದಿಗೆ ಎರಡು ಮುಡಿ (ಅಕ್ಕಿ) ವರಮಾನ ತರುವಂತಹ ಬೆಟ್ಟಿನ ಭೂಮಿಯನ್ನೂ ಸಹ ದಾನ ಮಾಡಲಾಯಿತು. ಸೋಮವಾರ ಅಮಾಸ್ಯೆ ದಿನದಂದು ಮಾಡಿದ ಈ ದಾನ ವನ್ನು ಸ್ವೀಕರಿಸಿದವರು ಋಕ್ ಶಾಖೆ, ಮೌದ್ಗಲ್ಯಗೋತ್ರದ ಜೋಯಿಸ ಹರಿಯಪ್ಪಗಳು.

ಈ ಶಾಸನ ಕಲ್ಲಿನ ಹೆಚ್ಚಿನ ಭಾಗ ಹಾಳಾಗಿದೆ, ಹಾಗಾಗಿ ಇದ್ದಿರ ಬಹುಧಾದ ಮುಖ್ಯ ಅಂಶಗಳು ನಷ್ಟವಾಗಿವೆ. 'ಕುಂದಾಪುರ' 'ಕೋಟನಾಥ' ಮತ್ತು 'ಶ್ರೀಪಾದಂಗಳು' ಇಲ್ಲಿ ಉಲ್ಲೇಖವಾಗಿವೆ. ಒಂದು ರೀತಿಯಲ್ಲಿ ಇವು ನಮ್ಮ ಅರ್ಥವ್ಯಾಪ್ತಿಯಿಂದ ದೂರವಾಗಿವೆ. ಇಲ್ಲಿ ಬರುವ ಶ್ರೀಪಾದಂಗಳು ಯಾರು? ಹಿಂದಿನ ಶಾಸನದಲ್ಲಿ ಶೃಂಗೇರಿಯ ಪೀಠಸ್ಥ ಸ್ವಾಮಿಗಳನ್ನು ಹೆಸರಿಸಲಾಗಿದೆ. ಈ ಶಾಸನದ ಶ್ರೀಪಾದಂಗಳು ಪ್ರಾಯಶಃ ಅದೇ ಮಠದ ಗುರುಪರಂಪರೆಗೆ ಸೇರಿದವರಿರಬಹುದು. ಆದರೆ ಯಾವ ಕಾರ್ಯಾರ್ಥ ಅವರ

ಉಲ್ಲೇಖ ವಾಗೂ ಅವರ ಹೆಸರೇನೆಂಬುದು ತಿಳಿಯುವುದಿಲ್ಲ. 'ಕೋಟಿನಾಥ' ಕೋಟೀಶ್ವರದ ದೇವರಿರಬಹುದು. ಕುಂದೇಶ್ವರ, ಕೋಟೀಶ್ವರ-ಎರಡೂ ದೇವರುಗಳನ್ನು ಶಾಸನವೊಂದು ಉಲ್ಲೇಖಿಸಿರುವುದನ್ನು ಮೇಲೆ ನೋಡಿದ್ದೇವೆ.

ಈ ಶಾಸನದಲ್ಲಿ ಉಕ್ತರಾದ ಜೋಯಿಸಹರಿಯಪ್ಪಗಳು ಎರಡೂ ದೇವಾಲಯಗಳ (ಕುಂದೇಶ್ವರ-ಕೋಟೀಶ್ವರ) ಪ್ರಮುಖ ವ್ಯಕ್ತಿಯಾಗಿರ ಬೇಕು. ಅಲ್ಲದೇ ಶೃಂಗೇರಿಮಠದೊಂದಿಗೂ ಸಂಪರ್ಕ ಹೊಂದಿದ್ದಿರಬಹುದು. ಬಾರಕೂರ ರಾಜ್ಯಪಾಲನಿಂದ ಶ್ರಾವಣಸೋಮಾವತೀ ಅಮಾವಾಸ್ಯೆಯಂದು ಇವರು ಸ್ವೀಕರಿಸಿದ ದಾನ ಎರಡೂ ದೇವಾಲಯಗಳಲ್ಲಿ ವಿಶೇಷ ಪೂಜಾ ವಿನಿಯೋಗಾರ್ಥವಿರಬಹುದು. ದಾಖಲೆಯೊಂದುದೊರೆತರೂ ಅಪೂರ್ಣ ವಾಗಿರುವುದು ಖೇದದ ಸಂಗತಿ.

ಈ ಶಾಸನದಿಂದ ಗೊತ್ತಾಗುವ ಒಂದು ಮುಖ್ಯ ಅಂಶವೆಂದರೆ. ಕುಂದಾಪುರ ತೀರದಲ್ಲಿ ಆಗ ಉಪ್ಪನ್ನು ತಯಾರಿಸುತ್ತಿದ್ದುದು. ಅದು ಸಾಕಷ್ಟು ದೊಡ್ಡ ಪ್ರಮಾಣದಲ್ಲಿದ್ದು ಬೊಕ್ಕಸಕ್ಕೆ ಒಳ್ಳೆಯ ಆದಾಯ ತರುತ್ತಿತ್ತು. ಇದು ಕುಂದಾಪುರದ ಆರ್ಥಿಕ ಪ್ರಗತಿಯನ್ನು ಸೂಚಿಸುತ್ತದೆ.

**ಹೊಸ ರಾಜ್ಯಪಾಲ :**

ಮಹಾಪ್ರಧಾನ ವಲ್ಲಭದೇವ ದಣ್ಣಾಯಕವೊಡೆಯನು ಬಾರಕೂರು ರಾಜ್ಯಪಾಲನಾಗಿದ್ದ ಎನ್ನುವ ವಿಚಾರ ಈ ಶಾಸನದಿಂದ ಮಾತ್ರ ತಿಳಿದು ಬರುತ್ತದೆ. ಈ ಹೊಸ ರಾಜ್ಯಪಾಲ ವಿದ್ವಾಂಸರ ಗಮನ ಸೆಳೆದಂತೆ ಕಂಡು ಬರುವುದಿಲ್ಲ. ಮಹಾಪ್ರಧಾನ ವಲ್ಲಭದೇವ ದಣ್ಣಾಯಕನು ರಾಜ್ಯಪಾಲರು ಗಳಾದ ಭಾಸಪ್ಪವೊಡೆಯ ಮತ್ತು ದೇವಣ್ಣ ವೊಡೆಯರ ನಡುವೆ ಬಂದಿತ ಬಾರಕೂರು ರಾಜ್ಯಪಾಲನ.

ಕೇಂದ್ರ ಶಾಸನ ಇಲಾಖೆ ಪ್ರಕಟಿಸಿರುವ ಶಾಸನ ಸಂಪುಟದಲ್ಲಿ(S11. IX. pt II No. 455) ಈ ಶಾಸನದ ಕಾಲವನ್ನು 21 ಆಗೋಸ್ತು 1451 ಎಂದು ತಿಳಿಸಲಾಗಿದೆ. ಆದರೆ ಇದು ಸರಿಯಲ್ಲ. ಶಾಸನದಲ್ಲಿ ಶಕವರ್ಷ 1373 ಸಂದು [illegible]...... ವತ್ಸರದ ಶ್ರಾವಣ ಬಹುಳ 10

ಆದಿವಾರದಲು' –ಎಂದಿದೆ. ಇಲ್ಲಿ ಶಕವರ್ಷ 1374 (ಅಂಗಿರಸ ಸಂವತ್ಸರ) ಆಗುತ್ತದೆ. ಇದು ಆಗೋಸ್ತು 10 ಕ್ರಿ. ಶ. 1452ಕ್ಕೆ ಸರಿಹೊಂದುತ್ತದೆ. (ದಾನ ಭಾಗದಲ್ಲಿ ಸೋಮವಾರ ಅಮಾ(ವಾಸ್ಯೆ) ದಿನದಂದು ಮಾಡಿದ ಧರ್ಮದ ವಿವರ ಇದೆ. ಇದು ಶ್ರಾವಣ ಅಮಾವಾಸ್ಯೆ ಇರಬಹುದು. ಇದರ ವಿವರಗಳು ಕ್ರಿ. ಶ. 1452ರ ಆಗೋಸ್ತು 15ಕ್ಕೆ ಸರಿಹೊಂದುತ್ತವೆ)

ಒಟ್ಟಿನಲ್ಲಿ ಪ್ರಮುಖದಾಖಲೆಯೊಂದಾದ ಈ ಶಾಸನ ಆಗೋಸ್ತು 1452ಕ್ಕೆ ಸೇರಿದ್ದು; ಕ್ರಿ.ಶ. 1451ಕ್ಕೆ ಅಲ್ಲ.

**ದೇವಾಲಯದ ರಚನೆ :**

ಕುಂದಾಪುರ ತಾಲೂಕಿನ ಪ್ರಾಚೀನ ದೇವಾಲಯಗಳಲ್ಲಿ ಕುಂದೇಶ್ವರ ಒಂದು. ಈ ದೇವಾಲಯದ ವಾಸ್ತುಶಿಲ್ಪದ ಬಗ್ಗೆ ಸ್ವಲ್ಪ ತಿಳಿಯುವುದು ಒಳ್ಳೆಯದು. ಸಮುದ್ರ ತೀರದಿಂದ ಪೂರ್ವಕ್ಕೆ ಸ್ವಲ್ಪ ದೂರದಲ್ಲಿ ಇದನ್ನು ಕಟ್ಟಲಾಗಿದೆ. ಸಾಕಷ್ಟು ವಿಶಾಲವಾದ ಹೊರಪ್ರಾಕಾರ, ಇಲ್ಲಿ ಮಹಾದ್ವಾರ. ಇದಕ್ಕೆ ಎದುರಾಗಿ ಬಲಿಪೀಠ. ಒಳಪ್ರಾಕಾರದಲ್ಲಿ ಒಂದು ನಂದಿಮಂಟಪ ಮತ್ತು ಪ್ರದಕ್ಷಿಣಾಪಥದ ಸುತ್ತಲೂ ಮಂಟಪ. ಒಳಪ್ರಾಕಾರದ ನಡುವೆ ಗರ್ಭಗೃಹ. ಇವು ದೇವಾಲಯದ ಮುಖ್ಯ ಅಂಗಗಳು. ಇಲ್ಲಿ ಧ್ವಜಸ್ತಂಭ ಇಲ್ಲ. ಇದೊಂದು ಗಮನಿಸಬೇಕಾದ ಅಂಶ.

**ಗರ್ಭಗೃಹ :**

ಕಗ್ಗಲ್ಲಿನಲ್ಲಿ ಸದೃಢವಾಗಿ ನಿರ್ಮಿಸಿರುವ ವೇದಿಕೆ. ಇದರ ಮೇಲೆ ಒಂದೇ ಕೋಣೆಯ ಗರ್ಭಗೃಹ. ಚಚ್ಚೌಕವಾದ ಈ ಗುಡಿಯ ಸುತ್ತ ಒಂದು ಕಿರಿದಾದ ಪ್ರದಕ್ಷಿಣಾ ಪಥ. ಸಾಧಾರಣ ರೀತಿಯಲ್ಲಿ ಮಾಡಿದ ಕಣಶಿಲೆಯ ಬಾಗಿಲುವಾಡ. ಕಲ್ಲು ಮತ್ತು ಮುರಕಲ್ಲುಗಳಿಂದ ಮಾಡಿದ ಗೋಡೆ. ಇದು ಕ್ರಿ.ಶ. ಸುಮಾರು ಎಂಟನೆಯ ಶತಮಾನದ ರಚನೆಯನ್ನು ಪ್ರತಿಬಿಂಬಿಸುತ್ತದೆ.

ಗರ್ಭಗೃಹದೊಳಗೆ ನೆಲಕ್ಕೆ ಕಗ್ಗಲ್ಲ ಚಪ್ಪಡಿಗಳನ್ನು ಹಾಸಿ ಸದೃಢಗೊಳಿಸಲಾಗಿದೆ. ಇಲ್ಲಿ ಸ್ಥಳಾವಕಾಶ ಮಾತ್ರ ಕಡಿಮೆ. ಇದರ ಕೇಂದ್ರಭಾಗದಲ್ಲಿ ಸರಳ ರೀತಿಯಲ್ಲಿ ಕೆತ್ತಲ್ಪಟ್ಟ ಕಲ್ಲಿನ ದೊಡ್ಡ ಪಾಣಿಪೀಠ. ಇದರಲ್ಲಿ



ಕರಿದು ಹೋಗಲು ಇರುವ ಸೋಮಸೂತ್ರದ ಭಾಗವೂ ಸರಳ ನೇರವಾಗಿ ಕತ್ತರಿಸಲ್ಪಟ್ಟ ಮೂರ್ತಿಯನ್ನು ಹೊಂದಿದೆ. ಪಾಣಿ ಕುಂದೇಶ್ವರ ಪ್ರತಿಷ್ಠೆ. ಶಿವಲಿಂಗ ರುದ್ರಾಕ್ಷ ಶಿಲೆಯಿಂದ ಮಾಡಿದ್ದು; ಹೊರಮೈ ತುಂಬಾ ದೊರಗಾಗಿದೆ. ಇದರ ಶಿರೋಭಾಗ ಅಡ್ಡಕ್ಕೆ ಸಲ್ಪಟ್ಟ ಕಂಬದಂತೆ ಚಪ್ಪಟೆಯಾಗಿದೆ. ಹಾಗಾಗಿ ಇದೊಂದು ಪದ ಶಿವಲಿಂಗ.

ಂದೇಶ್ವರನಿಗಿಂತ ಮೊದಲು ಪ್ರತಿಷ್ಠಾಪಿತವಾದ ಕೀಳ್ಗಾನೇಶ್ವರ ಹ ರುದ್ರಾಕ್ಷಿಶಿಲೆಯಿಂದ ಮಾಡಿದ್ದು. ಇದರ ಹೊರಮೈ ತುಂಬಾ ಗಿದೆ. ಆದರೆ ಕುಂದೇಶ್ವರನಂತೆ ತಲೆ ಚಪ್ಪಟೆಯಾಗಿಲ್ಲ.

**ಮಂಟಪ :**

ರ್ಭಗುಡಿ ಎದುರಿಗೆ ಪ್ರತ್ಯೇಕವಾದ ನಂದಿಮಂಟಪ; ಎತ್ತರವಾದ ಇದರಮೇಲೆ ನಾಲ್ಕು ಕಂಬಗಳು. ಇವುಗಳ ಮೇಲೆ ಮಂಟಪದ ಕರಿಶಿಲೆಯಲ್ಲಿ ಕಡೆದಿರುವ ನಂದಿ ಚಿಕ್ಕದಾದರೂ ಸುಂದರವಾಗಿದೆ. ತವಾದ ಆಭರಣ. ಕೊರಳು ಮತ್ತು ಬೆನ್ನ ಮೇಲೆ ಗೆಜ್ಜೆ ಮತ್ತು ಹಾರಗಳು. ನಡುವಿನಲ್ಲಿ ದೇಹವನ್ನು ಸುತ್ತಿ ಬಳಸಿರುವ ಒಂದು ಪಟ್ಟಿ. ಈ ಮಂಟಪಕ್ಕೀಗ ಹೊಸರೂಪ ಬಂದಿದೆ.

ಾವಿರವರ್ಷಗಳಷ್ಟು ಪ್ರಾಚೀನವಾದ ಈ ದೇವಾಲಯ ಹಲವಾರು ೀರ್ಣೋದ್ಧಾರಗೊಂಡಿರಬೇಕು. ಅಂತಹ ಸಂದರ್ಭಗಳಲ್ಲಿ ಸಾಮಾನ್ಯ ಹಳೆಯ ಕುರುಹುಗಳು ಹೋಗಿ ಹೊಸತು ರೂಪುಗೊಳ್ಳುವುದೇ ಇದು ದೇವಾಲಯದ ಕಾಲನಿರ್ಣಯಕ್ಕೆ ಆತಂಕ ಉಂಟುಮಾಡುವ ಕುಂದೇಶ್ವರನ ಗರ್ಭಗುಡಿ ಗೋಡೆಯ ಹೊರಭಾಗದಲ್ಲಿರುವ ಪಿಲಾ ಸ ಮತ್ತು ನಂದಿವಿಗ್ರಹ ಹತ್ತು-ಹನ್ನೊಂದನೆಯ ಶತಮಾನವನ್ನು ಸುವ ಕುರುಹುಗಳಾಗಿವೆ. ಡಾ॥ ಗುರುರಾಜ ಭಟ್ಟರವರು ್ಳಳರ ಉತ್ತರಾರ್ಧಕಾಲಕ್ಕೆ ಸೇರಬಹುದೆಂದು ಅಭಿಪ್ರಾಯ ಪಡು (Antiquities of South Kanara-1969-p:11)

ಗರ್ಭಗುಡಿ ಈಗ ಪುನಃ ಜೀರ್ಣೋದ್ಧಾರಗೊಂಡಿದೆ. ಆದರೆ ಅದು ಮೂಲರಚನೆಗೆ ಭಂಗ ತಂದಂತೆ ಕಾಣುವುದಿಲ್ಲ. ಗೋಡೆ ಮತ್ತು ಅಲ್ಲಿರುವ ಪಿಲಾಸ್ಟರುಗಳಿಗೆ ಈಗ ಸಿಮೆಂಟಿನ ಲೇಪ; ಕೆಳಹಂತದ ಮಾಡಿಗೆ ಕಾಂಕ್ರೀಟಿನ ಭದ್ರತೆ; ಇದರ ನಾಲ್ಕು ಮೂಲೆಗೂ ನಾಲ್ಕು ಸಣ್ಣಗೋಪುರಗಳ ಸೇರ್ಪಡೆಯಾಗಿದೆ.

ಗರ್ಭಗುಡಿಯ ಮೇಲೊಂದು ಸಣ್ಣಗೋಪುರ ಇದರ ಕೇಂದ್ರಭಾಗದಲ್ಲಿ ಕಲಶಸ್ಥಾಪನೆ, ಗೋಪುರದ ಮಾಡು ಮರದ್ದು. ತಾಮ್ರದ ತಗಡುಗಳನ್ನು ಹಾಸಿ ಇದನ್ನು ರಕ್ಷಿಸಲಾಗಿದೆ. ಮಾಡು ನಾಲ್ಕು ಭಾಗಗಳಲ್ಲಿ ಇಳಿಜಾರಾಗಿದ್ದು 45 ಡಿಗ್ರಿ ಕೋನದಲ್ಲಿದೆ. ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಇದು ಮುಳಿಹುಲ್ಲಿನ ಮಾಡಾಗಿತ್ತು.

**ಪಾರ್ವತಿ ಮತ್ತು ಗಣಪತಿ :**

ಗರ್ಭಗುಡಿಯ ಪಾಣಿಪೀಠದ ಬಳಿ ಪ್ರತಿಷ್ಠಾಪಿತವಾಗಿರುವ ಕರಿಶಿಲೆಯ ಎರಡು ತುಣಕುಗಳನ್ನು ಪಾರ್ವತಿ ಮತ್ತುಗಣಪತಿ ಎಂದು ಗುರುತಿಸಿರುತ್ತಾರೆ. ಮೂಲತಃ ಇದು ಶುದ್ಧಶಿವಾಲಯ. ಇಲ್ಲಿ ಬೇರಾವ ದೇವ-ದೇವತೆಗಳಿಗೆ ಸ್ಥಾನ-ಅವಕಾಶ ಇರಲಿಲ್ಲ. ಪ್ರಾಚೀನಕಾಲದಲ್ಲಿ ಇದ್ದ ಒಂದು ಪದ್ಧತಿ ಇದು. ಈ ರೀತಿಯಲ್ಲಿ ಶಿವಾಲಯಗಳನ್ನು ನಿರ್ಮಿಸಿದ ಉದಾಹರಣೆ ನಮ್ಮ ಜಿಲ್ಲೆಯಲ್ಲಿ ಹಲವಾರು ಇದೆ. ಕುಂದೇಶ್ವರ ದೇವಾಲಯದಲ್ಲಿ ಪಾರ್ವತಿ ಮತ್ತು ಗಣಪತಿಯರ ಆಗಮನ ಬಹಳ ಕಾಲಾನಂತರ ಆಗಿರಬೇಕು. ಇವರುಗಳಿಗಾಗಿ ಪ್ರತ್ಯೇಕ ಸ್ಥಳ ಆಗ ಇರಲಿಲ್ಲ. ಹಾಗಾಗಿ ಗರ್ಭಗೃಹದಲ್ಲೇ ಸ್ಥಾಪನೆ. ಈಗ ಗರ್ಭಗೃಹದ ಹೊರಗೆ ಬಾಗಿಲ ಇಕ್ಕೆಲಗಳಲ್ಲಿ ಪ್ರತ್ಯೇಕ ಮಂಟಪಗಳನ್ನುರಚಿಸಿ ಪಾರ್ವತಿ ಮತ್ತು ಗಣಪತಿಯರ ಸುಂದರ ವಿಗ್ರಹಗಳನ್ನು ಶಾಸ್ತ್ರೋಕ್ತವಾಗಿ ಪ್ರತಿಷ್ಠಾಪಿಸಲಾಗಿದೆ.

**ಪ್ರಾಕಾರ ಮತ್ತು ಗೋಪುರ :**

ಈ ದೇವಾಲಯಕ್ಕೆ ಎರಡು ಪ್ರಾಕಾರಗಳು, ಒಳಪ್ರಾಕಾರದ ಸುತ್ತ ಮಂಟಪ ಇದೆ. ಹೊರಪ್ರಾಕಾರಕ್ಕೆ ಪೌಳಿಗೋಡೆ ಮಾತ್ರ. ಎರಡಕ್ಕೂ ಸಾಮಾನ್ಯ ರೀತಿಯಲ್ಲಿ ಪ್ರವೇಶದ್ವಾರ ಮತ್ತು ಮಂಟಪಗಳಿದ್ದುವು. ಇದೇ

ರೀತಿಯಲ್ಲಿ ಹೊರಪ್ರಾಕಾರದಲ್ಲಿ ಚಂದ್ರಶಾಲೆ ಇತ್ತು. ಈಗ ಇವುಗಳಿಗೆ ಸಂಪೂರ್ಣ ಬದಲಾದ ಸ್ವರೂಪ. ಒಳಪ್ರಾಕಾರಕ್ಕೆ ಈಗಾಗಲೆ ಸುಂದರವಾದ ಪ್ರವೇಶದ್ವಾರ, ಮಂಟಪ ಮತ್ತು ಗೋಪುರ ಬಂದಿವೆ. ಹೊರಪ್ರಾಕಾರದ ಚಂದ್ರಶಾಲೆ ಮತ್ತು ಮಹಾದ್ವಾರಗಳೂ ಇದೇ ರೀತಿಯಲ್ಲಿ ಹೊಸರೂಪ ಪಡೆಯುತ್ತಿವೆ. ಒಂದಂತಸ್ತಿನ ಚಂದ್ರಶಾಲೆಯಲ್ಲಿ ಪ್ರವಚನ ಮಂದಿರ ಮತ್ತು ಕಲ್ಯಾಣಮಂಟಪಗಳು ಸಿದ್ಧವಾಗುತ್ತಿವೆ. ಬೃಹದಾಕಾರದ ಮಹಾದ್ವಾರ ಹಾಗೂ ಅದರ ಮೇಲೆ ಸುಂದರವಾದ ಗೋಪುರ ನಿರ್ಮಾಣವಾಗಲಿವೆ. ಈ ನಿರ್ಮಾಣ ಕಾರ್ಯ ಭರದಿಂದ ಸಾಗಿದೆ.

**ಗೋಪುರ ಮತ್ತು ಮಾಡು :**

ಕುಂದೇಶ್ವರನ ಗರ್ಭಗುಡಿಯ ಮೇಲಿರುವ ಗೋಪುರಕ್ಕೂ ಮತ್ತು ಈಗ ಪ್ರಾಕಾರದ್ವಾರಗಳ ಮೇಲೆ ತಲೆ ಎತ್ತುತ್ತಿರುವ ಗೋಪುರಗಳಿಗೂ ಬಹಳ ವ್ಯತ್ಯಾಸ ಇದೆ. ಮೊದಲನೆಯದು ಸಾಂಪ್ರದಾಯಿಕ ಸ್ಥಳೀಯ ಶೈಲಿಯಲ್ಲಿದೆ. ಉಳಿದವು ದಕ್ಷಿಣಾದಿ ಶೈಲಿಯನ್ನು ಹೊಂದಿವೆ. ಇತ್ತೀಚಿನ ವರ್ಷಗಳಲ್ಲಿ ಜೀರ್ಣೋದ್ಧಾರಗೊಂಡ ದೇವಾಲಯಗಳಲ್ಲಿ ದಕ್ಷಿಣಾದಿಶೈಲಿಯ ಗೋಪುರ ನಿರ್ಮಾಣ ಈ ಜಿಲ್ಲೆಯಲ್ಲಿ ಕಂಡುಬರುವ ಸಾಮಾನ್ಯ ದೃಶ್ಯ.

ದಕ್ಷಿಣ ಭಾರತ ದೇವಾಲಯಗಳಲ್ಲಿ ಕಂಡುಬರುವ ಗೋಪುರಕ್ಕೂ ಕರಾವಳಿ ಕರ್ನಾಟಕದ ದೇವಾಲಯಗಳ ಗೋಪುರಕ್ಕೂ ಬಹಳ ವ್ಯತ್ಯಾಸವಿದೆ. ಸಾಮಾನ್ಯವಾಗಿ ಸುಟ್ಟ ಇಟ್ಟಿಗೆ ಮತ್ತು ಗಾರೆಗಳಿಂದ ಕಟ್ಟಿದ ದಕ್ಷಿಣಾದಿ ಗೋಪುರಗಳಿಗೆ ಮಾಡಿನ (ಛಾವಣಿಯ) ಅವಶ್ಯಕತೆ ಇಲ್ಲ. ಗೋಪುರದ ಆಕಾರ ಕೆಳಗಿನಿಂದ ಮೇಲಕ್ಕೆ ಹೋದಂತೆಲ್ಲಾ ಸಂಕುಚಿತಗೊಂಡು ಶಿಖರ ಭಾಗದಲ್ಲಿ ಕೂಡಿಕೊಳ್ಳುತ್ತದೆ. ಇಲ್ಲಿ ಕಲಾಕಾರ ತನ್ನ ಚಮತ್ಕಾರಿಕೆಯನ್ನು ಅಭಿವ್ಯಕ್ತಗೊಳಿಸಲು ಮತ್ತು ಪ್ರತಿಹಂತದಲ್ಲೂ ಗೋಪುರವನ್ನು ಸುಂದರ ಗೊಳಿಸಲು ವಿಪುಲ ಅವಕಾಶ ಇದೆ.

ಕರಾವಳಿ ಕರ್ನಾಟಕದಲ್ಲಿ ಗೋಪುರ ರಚನೆ ತೀರ ಸರಳ. ತಳವಿನ್ಯಾಸದ ಮೇಲೆ ಗರ್ಭಗುಡಿಯ ಗೋಡೆ; ಇದನ್ನೆ ಗರ್ಭಗುಡಿಯಿಂದ ಮೇಲಕ್ಕೆ

ಒಂದು ಹಂತ ಏರಿಸಿದರೆ ಗೋಪುರಭಾಗ ನಿರ್ಮಾಣ. ಆದರೆ ತುದಿಯಲ್ಲಿ ಗೋಡೆಗಳು ಕೂಡಿಕೊಳ್ಳುವುದಿಲ್ಲ. ಹಾಗಾಗಿ ಮಾಡಿನ ಅವಶ್ಯಕತೆ. ದೇವಾಲಯ ಸಂಪೂರ್ಣ ಶಿಲಾ ನಿರ್ಮಿತವಾಗಿದ್ದರೆ ಗೋಪುರದ ಮಾಡು ಸಾಮಾನ್ಯವಾಗಿ ಶಿಲೆಯದೆ ಆಗಿರುತ್ತದೆ. ಇಲ್ಲದಿದ್ದಲ್ಲಿ ಮರದ ರಚನೆ. ಅದರ ರಕ್ಷಣೆಗೆ ತಾಮ್ರದ ತಗಡಿನ ಹಾಸು. ಮೇಲೆ ಕೇಂದ್ರ ಭಾಗದಲ್ಲಿ ಕಲಶವಿದ್ದು ಮಾಡು ಇಳಿಜಾರಾಗಿರುತ್ತದೆ.

ಇಲ್ಲಿನ ದೇವಾಲಯಗಳ ಮಾಡು ವಿಶೇಷ ರೀತಿಯದು. ಇಳಿಜಾರಾಗಿ ಭಾರವಾದ ಕಲ್ಲು ಚಪ್ಪಡಿಗಳನ್ನು ಎತ್ತರದಲ್ಲಿ ಒಂದರ ಮೇಲೆ ಒಂದರಂತೆ 45 ಡಿಗ್ರಿ ಕೋನದಲ್ಲಿ ಜೋಡಿಸುವುದು ಬಹಳ ಕಷ್ಟದ ಕೆಲಸ. ದೇವಾಲಯದ ಭಾಗಗಳು ಹಂತ-ಹಂತವಾಗಿ ಮೇಲೆ ಕಟ್ಟಲ್ಪಟ್ಟಿದ್ದರೆ ಪ್ರತಿ ಹಂತದಲ್ಲೂ ಅವಶ್ಯಕತೆಗೆ ತಕ್ಕಷ್ಟು ಮಾಡು. ಇದು ದೇವಾಲಯಕ್ಕೆ ಒಂದು ರೀತಿಯ ಆಕರ್ಷಣೆಯನ್ನೊದಗಿಸಿದೆ. ಗೋಪುರಗಳ ಮಾಡಿಗೆ ಇದೇ ರೀತಿಯಲ್ಲಿ ತಾಮ್ರದ ತಗಡನ್ನು ಹಾಸಲಾಗಿರುತ್ತದೆ. ಈ ತೆರನಾದ ಮಾಡು ಹೆಚ್ಚು ಮಳೆ ಬೀಳುವ ಈ ಪ್ರದೇಶಕ್ಕೆ ಅತ್ಯಾವಶ್ಯಕ.

ಹಿಮಾಲಯ ಪರ್ವತ ರಾಜ್ಯಗಳಲ್ಲಿನ ವಾಸ್ತುಶೈಲಿ ಈ ಕರಾವಳಿ ಶೈಲಿಯನ್ನೇ ಹೋಲುತ್ತದೆ. ಹಿಮಾಲಯ ಪ್ರದೇಶಗಳನ್ನು ಸುತ್ತಿ ಬಂದ ಹಲವು ವಿದೇಶಿಕಲಾತಜ್ಞರು ನಮ್ಮಲ್ಲಿನ ಶೈಲಿಯನ್ನು 'ಹಿಮಾಲಯ ಶೈಲಿ' 'ನೇಪಾಳಿ ಶೈಲಿ'-ಎಂದೆಲ್ಲಾ ಕರೆದಿರುತ್ತಾರೆ. ಆದರೆ ನಮ್ಮಲ್ಲಿನ ಆದಿವಾಸಿಗಳೂ ಕಟ್ಟುವ ಗುಡಿಸಲಿನ ಛಾವಣಿ ಇದೇ ಶೈಲಿಯದು. ಈ ಶೈಲಿ ಇಲ್ಲಿಯ ಪರಿಸರ ಮತ್ತು ಹವಾಮಾನಕ್ಕೆ ತಕ್ಕಂತೆ ಹುಟ್ಟಿಕೊಂಡಿತೆ ವಿನಹ ಬೇರಾವುದೇ ಅನುಕರಣೆಯಿಂದಲ್ಲ. ಹಾಗಾಗಿ ಈ ಶೈಲಿಯನ್ನು 'ಕೆನರಾಶೈಲಿ' ಅಥವಾ 'ಪಶ್ಚಿಮ ಕರಾವಳಿ ಶೈಲಿ' ಎಂದು ಕರೆದರೆ ಹೆಚ್ಚು ಸಮಂಜಸ. (ವಿದೇಶೀ ವಿದ್ವಾಂಸರು ಮೊದಲು ಪಶ್ಚಿಮ ಕರಾವಳಿ ಶೈಲಿಯನ್ನು ನೋಡಿ ಹಿಮಾಲಯ ಪ್ರದೇಶಕ್ಕೆ ಹೋಗಿದ್ದರೆ ಅಲ್ಲಿಯ ಶೈಲಿಯನ್ನು ಪ್ರಾಯಶಃ ಕರಾವಳಿ ಶೈಲಿ ಎಂದೇ ಕರೆಯುತ್ತಿದ್ದರು.)



# ಪುನರುತ್ಥಾನ

ಕುಂದೇಶ್ವರನಿಗೆ ಹಲವಾರು ಏಳು-ಬೀಳುಗಳು. ವಿಜಯನಗರ ಪತನಾನಂತರ ಕೆಳದಿ ಅರಸರ ಸಾರ್ವಭೌಮತೆ. ಅನಂತರ ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಆಡಳಿತ ಕೊನೆಗೆ ಆಂಗ್ಲರ ಅಧಿಕಾರ. ಈ ರಾಜಕೀಯ ಬದಲಾವಣೆ ಸ್ವಲ್ಪ ಮಟ್ಟಿಗೆ ಸಾಮಾಜಿಕ ಅಸ್ಥಿರತೆಗೆ ಅವಕಾಶಮಾಡಿಕೊಟ್ಟಿತು. ಇದರ ಪ್ರಭಾವ ಕುಂದೇಶ್ವರ ದೇವಾಲಯದ ಮೇಲೂ ಆಯಿತು. ಆರ್ಥಿಕ ದುಸ್ಥಿತಿ ಕಾಡಲಾರಂಭಿಸಿತು. ಸ್ವಾತಂತ್ರ್ಯಾನಂತರದ ಕಾಲದವರೆಗೂ ಈ ಪರಿಸ್ಥಿತಿ ಮುಂದುವರೆಯಿತು. ಸಮಾಜದ ಆರ್ಥಿಕಸ್ಥಿತಿ ಉತ್ತಮವಾದಂತೆ ದೇವಾಲಯವೂ ಅಭಿವೃದ್ಧಿಪಥದತ್ತ ಮುಂದುವರೆಯಿತು. ಇತ್ತೀಚಿನ ದಿನಗಳಲ್ಲಿ ಕುಂದೇಶ್ವರ ತನ್ನ ಹಿಂದಿನ ವೈಭವವನ್ನು ಮರಳಿ ಪಡೆಯುವತ್ತ ದಾಪುಗಾಲು ಹಾಕಿದೆ.

ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಕುಂದೇಶ್ವರನ ಆಡಳಿತ ವ್ಯವಸ್ಥೆ ಹೇಗಿತ್ತೆಂದು ಹೇಳುವುದು ಕಷ್ಟ. 1954ಕ್ಕೆ ಹಿಂದೆ ಶ್ರೀ ಕೋಣಿ ನರಸಿಂಹ ಕಳಂತರು ಮೊಕ್ತೇಸರರಾಗಿದ್ದಂತೆ ತಿಳಿದು ಬರುತ್ತದೆ. ಸ್ವಾತಂತ್ರ್ಯ ಸಮರದ ಅಂತಿಮ ಘಟ್ಟವಾದ 1940ರ ದಶಕದಲ್ಲಿ ಇವರು ಆಡಳಿತ ನಡೆಸಿರಬಹುದು.

ಇವರ ಕಾಲದಲ್ಲಿ ನಡೆದ ಪ್ರಮುಖ ಘಟನೆ ಎಂದರೆ ದೇವಾಲಯದ ಗರ್ಭಗುಡಿ ಮಾಡಿಗೆ ತಾಮ್ರದ ಹೊದಿಕೆ ಹಾಕಿಸಿದ್ದು. ಅದುವರೆಗೂ ಇದು ಮುಳಿಹುಲ್ಲಿನ ಮಾಡಾಗಿತ್ತು. ಇದೊಂದು ಧರ್ಮಕಾರ್ಯ. ಇದನ್ನು ಮಾಡಿದವರು ಪಡೇರಹೋಬಳಿ ಹೊಳೆಬದಿ ಶ್ರೀ ರಾಮಕೃಷ್ಣ [illegible]

**ಆಡಳಿತ ವ್ಯವಸ್ಥೆ :**

ದೇವಾಲಯದಲ್ಲಿ ಲಭ್ಯವಿರುವ ದಾಖಲೆಗಳ ಪ್ರಕಾರ 1954ರಿಂದ ಆಡಳಿತ ವ್ಯವಸ್ಥೆಯ ವಿಚಾರ ತಿಳಿದುಬರುತ್ತದೆ. ಹಿಂದಿನ ದಾಖಲೆಗಳಿಲ್ಲದಿರುವುದು ಒಂದು ದೊಡ್ಡ ಕೊರತೆ. ಅದರ ಪ್ರಕಾರ ಶ್ರೀ ವೆಂಕಪ್ಪ ಶೆಟ್ಟಿ (1954-59) ಶ್ರೀ ಬಿ. ವಿ. ಕಾರಂತ್ (1959-64) ಶ್ರೀ ಎಚ್. ಲಕ್ಷ್ಮೀನಾರಾಯಣಯ್ಯ (1964-69) ಶ್ರೀ ಜಿ. ರಾಮಕೃಷ್ಣ ರಾವ್ (1969-71) ಪ್ರಸ್ತುತ ಶ್ರೀ ಪಿ. ನಾರಾಯಣ ಕಾರಂತ (1971-80)- ಇವರುಗಳು ದೇವಾಲಯದ ಧರ್ಮದರ್ಶಿಗಳಾಗಿ ಸೇವೆ ಸಲ್ಲಿಸಿದ್ದಾರೆ.

1980ರಿಂದ ಆಡಳಿತ ಮಂಡಳಿಯೊಂದು ಅಸ್ತಿತ್ವಕ್ಕೆ ಬಂದಿದೆ. ಇದರಲ್ಲಿ ಒಬ್ಬರು ಆಡಳಿತ ಮೊಕ್ತೇಸರರು ಮತ್ತು ಎಂಟು ಜನ ಸದಸ್ಯರಿರುತ್ತಾರೆ. ಶ್ರೀ ಎಚ್. ವಿ. ನರಸಿಂಹ ಮೂರ್ತಿಯವರು 1980ರಿಂದ ಆಡಳಿತ ಮೊಕ್ತೇಸರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಶ್ರೀಯುತರಾದ ಎ. ಎಸ್. ಎನ್. ಹೆಬ್ಬಾರ್, ಜಿ. ಕುಶಲ ಹೆಗ್ಡೆ, ವಿ. ನಾರಾಯಣ ಕಾರಂತ, ಜಿ. ರಾಮಕೃಷ್ಣ ರಾವ್, ಕೆ. ಪ್ರಭಾಕರ ಹವಾಲ್ದಾರ್, ವಿ. ಅಣ್ಣಪ್ಪಯ್ಯ, ಮಾಣಿ ಗೋಪಾಲ್, ಕೆ. ಸುಬ್ಬ–ಇವರು ಪ್ರಕೃತ ಆಡಳಿತ ಮಂಡಳಿಯ ಸದಸ್ಯರಾಗಿರುತ್ತಾರೆ.

**ಜೀರ್ಣೋದ್ಧಾರ ಸಮಿತಿ :**

ಶ್ರೀ ವಿ. ನಾರಾಯಣ ಕಾರಂತರ ಆಡಳಿತ ಮೊಕ್ತೇಸರಿಕೆ ಕಾಲದಲ್ಲಿ ದೇವಾಲಯದ ಜೀರ್ಣೋದ್ಧಾರ ವಿಚಾರ ಪ್ರಾಮುಖ್ಯ ಪಡೆಯಿತು. ಆದಕ್ಕಾಗಿ ಒಂದು ಪ್ರತ್ಯೇಕ ಸಮಿತಿ ಅಸ್ತಿತ್ವಕ್ಕೆ ಬಂತು. ಹಿಂದಿನ ಆಡಳಿತ ಮೊಕ್ತೇಸರರಾಗಿದ್ದ ಶ್ರೀ ಜಿ. ರಾಮಕೃಷ್ಣರಾಯರು ಇದರ ಪ್ರಥಮ ಅಧ್ಯಕ್ಷರಾದರು. ಶ್ರೀಯುತರಾದ ಎಸ್. ಕೃಷ್ಣರಾಯ ಹಾಲಂಬಿ(ಉಪಾಧ್ಯಕ್ಷ) ವಿ. ನಾರಾಯಣ ಕಾರಂತ (ಕಾರ್ಯದರ್ಶಿ-ಕೋಶಾಧ್ಯಕ್ಷ) ಕೆ. ರಾಮದಾಸ ಮಂಜ(ಜತೆ ಕಾರ್ಯದರ್ಶಿ) ಹಾಗೂ ಇತರ 15ಮಂದಿ ಮಹನೀಯರು ಇದರ ಸದಸ್ಯರಾಗಿ 1971ರಿಂದ 80ರವರೆಗೆ ಕಾರ್ಯ ನಿರ್ವಹಿಸಿದರು.

1980ರಲ್ಲಿ ಮಾಜಿ ಶಾಸಕ ಶ್ರೀ ಯಡ್ತರೆ ಮಂಜಯ್ಯ ಶೆಟ್ಟರು ಈ ಸಮಿತಿಯ ಅಧ್ಯಕ್ಷರಾದರು. ಶ್ರೀಯುತರಾದ ಜಿ. ಕುಶಲ ಹೆಗ್ಡೆ, ಜಿ. ರಾಮಕೃಷ್ಣ ರಾವ್ (ಉಪಾಧ್ಯಕ್ಷರು) ಎಚ್. ವಿ. ನರಸಿಂಹ ಮೂರ್ತಿ (ಕಾರ್ಯದರ್ಶಿ–ಕೋಶಾಧ್ಯಕ್ಷ) ಮಾಣಿ ಗೋಪಾಲ್ (ಜತೆ ಕಾರ್ಯದರ್ಶಿ) ಹಾಗು ಇತರ ಆರು ಮಂದಿ ಸದಸ್ಯರು ಈ ಸಮಿತಿಯಲ್ಲಿದ್ದರು. 1985ರಲ್ಲಿ ಈ ಸಮಿತಿಯನ್ನು ಮುಂದುವರೆಸಿ 23ಜನ ಗೌರವಸದಸ್ಯರನ್ನು ಇದಕ್ಕೆ ಸೇರ್ಪಡೆಮಾಡಲಾಯಿತು. ಇದಕ್ಕೆ ತಾಲ್ಲೂಕು, ಜಿಲ್ಲೆ ಹಾಗೂ ದೂರದ ಬೆಂಗಳೂರು ಮತ್ತು ಬೊಂಬಾಯಿ ನಗರಗಳಿಂದ ಪ್ರತಿನಿಧಿಗಳನ್ನು ಆರಿಸಲಾಗಿದೆ.

ಈ ಮಹನೀಯರುಗಳ ಕಾರ್ಯಕ್ಷಮತೆಯ ಫಲದಿಂದ ದೇವಾಲಯದಲ್ಲಿ ಹಲವಾರು ಅಭಿವೃದ್ಧಿ ಕಾರ್ಯಗಳು ನಡೆದಿವೆ.

**ಮೊದಲ ಕಾರ್ಯ :**

ಶ್ರೀ ಬಿ. ವಿ. ಕಾರಂತರು ಧರ್ಮದರ್ಶಿಗಳಾಗಿದ್ದಾಗ 1962ರಲ್ಲಿ ಕುಂದೇಶ್ವರನಿಗೆ ಅಷ್ಟಬಂಧ ಮಹೋತ್ಸವವು ಅತ್ಯಂತ ವಿಜೃಂಭಣೆಯಿಂದ ನೆರವೇರಿತು. ಇದು ನಡೆದದ್ದು ಪ್ಲವನಾಮ ಸಂವತ್ಸರದ ಫಾಲ್ಗುಣ ಶುದ್ಧ ಷಷ್ಟಿ (11–3–1962) ಭಾನುವಾರದಿಂದ ನವಮಿ (14–3-62) ಬುಧವಾರದವರೆಗೆ ಮೂರು ದಿನಗಳ ಕಾಲ.ಕುಂದೇಶ್ವರನಿಗೆ ಹಿಂದೆ ಅದೆಷ್ಟೋ ಅಷ್ಟಬಂಧ-ಬ್ರಹ್ಮಕಲಶೋತ್ಸವಗಳು ನಡೆದಿರಬಹುದು. ಆದರೆ ಈಗಿನದು ಮಾತ್ರ ಜನರನ್ನು ಕುಂದೇಶ್ವರನೆಡೆಗೆ ಹೆಚ್ಚಾಗಿ ಸೆಳೆಯಿತು. 1966ರಲ್ಲಿ ಶ್ರೀ ಮಾಣಿಪ್ಪಟ್ಟ ಪೂಜಾರಿಯವರು ದೇವರ ದರ್ಶನಕ್ಕೆ ನಿಲ್ಲುವ ಸ್ಥಳದಲ್ಲಿ ಹಂಚಿನ ಕಟ್ಟಡವನ್ನು ಕಟ್ಟಿಸಿಕೊಟ್ಟರು. 1969ರಲ್ಲಿ ದಿ॥ ಹೊಳೆಬದಿ ರಾಮಕೃಷ್ಣ ಕಾರಂತರ ಸ್ಮರಣಾರ್ಥ ಅವರ ಮಗ ಶ್ರೀ ವಿ. ನಾರಾಯಣ ಕಾರಂತರು ಅಗ್ರಶಾಲೆಯನ್ನು ಕಟ್ಟಿಸಿದರು. 1972ರಲ್ಲಿ ಮುಂಬೈ ಚಾರ್ಟರ್ಡ್ ಬೇಂಕಿನ ಮೊಗವೀರ ಬಂಧುಗಳು ನಂದಿಮಂಟಪವನ್ನು ನವೀಕರಿಸಿದರು. 1977ರಲ್ಲಿ ದಿ॥ ಕೆ. ದಾಸಪ್ಪನವರ ಸ್ಮರಣಾರ್ಥ ಅವರ ಸಹೋದರ ಮುಂಬಯಿಯ ಶ್ರೀ ಕೆ. ಶ್ರೀನಿವಾಸರಾವ್‌ರವರು ಗೋಪುರ ಮತ್ತು ವಿಗ್ರಹಗಳಿಂದ ಕೂಡಿದ ಪ್ರವೇಶದ್ವಾರವನ್ನು ನಿರ್ಮಿಸಿಕೊಟ್ಟರು. ಇದು ದೇವಾಲಯದ ರಸ್ತೆ ಮುಖ್ಯ ರಸ್ತೆಯನ್ನು ಕೂಡುವಲ್ಲಿದೆ. ಭವ್ಯವಾದ ಈ ದ್ವಾರವು ಜನರಿಗೆ ದೇವಾಲಯದ ಇರುವಿಕೆಯನ್ನು ಸದಾ ನೆನಪಿಗೆ ತರುತ್ತದೆ.

**ಮುಖ್ಯ ಕಾರ್ಯ :**

ಎಲ್ಲಕ್ಕಿಂತ ಮಿಗಿಲಾದದ್ದು ಗರ್ಭಗುಡಿಯ ಜೀರ್ಣೋದ್ಧಾರ. 1980 ರಿಂದ ಇದಕ್ಕಾಗಿ ಪ್ರಯತ್ನ; ನೀಲಿನಕ್ಷೆಯ ತಯಾರಿ. ಗರ್ಭಗುಡಿಯನ್ನು ಮೂಲರಚನೆಗೆ ಧಕ್ಕೆ ಬಾರದ ರೀತಿಯಲ್ಲಿ ಆಮೂಲಾಗ್ರವಾಗಿ ನವೀಕರಿಸುವ ಪ್ರಯತ್ನ. ಒಳಪ್ರಾಕಾರಕ್ಕೆ ಹೊಸದಾದ ಪ್ರವೇಶದ್ವಾರ, ಮಂಟಪ ಮತ್ತು ಅದರ ಮೇಲೊಂದು ಸುಂದರವಾದ ಚಿಕ್ಕ ಗೋಪುರ ನಿರ್ಮಾಣ. ಪ್ರಾಕಾರ ದೊಳಗೆ ಪ್ರದಕ್ಷಿಣಾಪಥಕ್ಕೆ ಕಣಶಿಲೆಯನ್ನು ಹಾಸಿ ಸವ್ಯಢಗೊಳಿಸುವ ಹಾಗು ಪಾರ್ವತಿ ಮತ್ತು ಗಣಪತಿಯ ಸುಂದರ ವಿಗ್ರಹಗಳ ನಿರ್ಮಾಣದ ಅವಶ್ಯಕತೆ.

ವಿಗ್ರಹಗಳಿಗಾಗಿ ಗರ್ಭಗುಡಿಯ ಹೊರಗೆ ಮಂಟಪಗಳ ನಿರ್ಮಾಣ. ಪ್ರಾಕಾರದ ಸುತ್ತಲಿನ ಮಂಟಪ, ತೀರ್ಥಮಂಟಪ ಮತ್ತು ನಾಗಬನಗಳ ಪುನರ್ನಿರ್ಮಾಣ. ಇದರೊಂದಿಗೆ ವಿಶಾಲವಾದ ಒಂದು ಬಯಲುರಂಗ ಮಂದಿರ. ಜೀರ್ಣೋದ್ಧಾರಕಾರ್ಯ ಪ್ರಾರಂಭವಾದಂತೆ ಅವಶ್ಯಕತೆಗಳ ಪಟ್ಟಿ ಬೆಳೆಯುತ್ತಾ ಹೋಯಿತು. ಮೊದಲ ಹಂತದ ಕಾರ್ಯ ಒಂದು ರೀತಿಯ ಕಾಲಮಿತಿ ಪರಿಧಿಯಲ್ಲಿ ಭರದಿಂದ ಸಾಗಿತು. 1985ರ ಎಪ್ರಿಲ್ ವೇಳೆಗೆ ಈ ಕಾರ್ಯಗಳು ಮುಕ್ತಾಯ ಘಟ್ಟ ತಲಪಿದುವು. ದೇವಾಲಯ ಹೊಸತನದ ಚೆಲುವನ್ನು ಪಡೆದಿತ್ತು.

## 1985ರ ಬ್ರಹ್ಮಕಲಶ :

ಮೊದಲ ಹಂತದ ಕಾರ್ಯಗಳು ಮುಗಿದಾಗ ದೇವಾಲಯಕ್ಕೆ ಸಂಪ್ರೋಕ್ಷಣೆಯ ಅವಶ್ಯಕತೆ. ಇದಕ್ಕಾಗಿ ಅಷ್ಟಬಂಧ, ಬ್ರಹ್ಮಕಲಶ ಮಹೋತ್ಸವ. ಎಪ್ರಿಲ್ 22ರಿಂದ ಮೂರು ದಿನಗಳ ಕಾಲ ಧಾರ್ಮಿಕ-ಸಾಂಸ್ಕೃತಿಕ ಉತ್ಸವಗಳ ನಗಾರಿ ಮೊಳಗಿತು. ಬಾಳಕುದ್ರು, ಎಡನೀರು ಮತ್ತು ಹರಿಹರಪುರ ಮಠಗಳ ಪೂಜನೀಯ ಯತಿತ್ರಯರ ದಿವ್ಯ ಸಮ್ಮುಖದಲ್ಲಿ ಕುಂದೇಶ್ವರನಿಗೆ ಬ್ರಹ್ಮಕಲಶಾದಿ ಶಾಸ್ತ್ರೋಕ್ತ ಕಾರ್ಯಗಳು ನೆರವೇರಿದುವು. ಗರ್ಭಗುಡಿಯ ಹೊರಗೆ ಇಕ್ಕೆಲಗಳಲ್ಲಿ ನಿರ್ಮಿಸಿದ್ದ ಮಂಟಪಗಳಲ್ಲಿ ಕರಿಶಿಲೆಯಲ್ಲಿ ಸುಂದರವಾಗಿ ಕೆತ್ತಲಾದ ಪಾರ್ವತಿ ಮತ್ತು ಗಣೇಶರ ಹೊಸ ವಿಗ್ರಹಗಳನ್ನು ಶಾಸ್ತ್ರೋಕ್ತವಾಗಿ ಪ್ರತಿಷ್ಠಾಪಿಸಲಾಯಿತು. ಕುಂದೇಶ್ವರ ಮತ್ತೊಮ್ಮೆ ವಿಜೃಂಭಿಸಿತು.

## ಹೊರೆ ಕಾಣಿಕೆ :

ಜಿಲ್ಲೆಯ ಕೆಲವು ಕಡೆ ಬೆಳೆದುಬಂದ ಪದ್ಧತಿಯೆಂದರೆ ವಿಶೇಷ ಸಂದರ್ಭಗಳಲ್ಲಿ ದೇವಾಲಯಕ್ಕೆ ಗ್ರಾಮಸ್ಥರಿಂದ ಹೊರೆಕಾಣಿಕೆ ಸಮರ್ಪಣೆ. ಇದು ಒಂದು ರೀತಿಯಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಪ್ರತಿಬಿಂಬಿಸುವಂತಹುದು. ವಿಶೇಷ ಪೂಜಾಸಂದರ್ಭಗಳಲ್ಲಿ ದೇವಾಲಯದಲ್ಲಿ ಆಗಬಹುದಾದ ಹೆಚ್ಚಿನ ಖರ್ಚು-ವೆಚ್ಚಗಳನ್ನು ಭರಿಸುವ ಸಲುವಾಗಿ ಸಮಾಜದ ಪ್ರತಿಯೊಂದು ವರ್ಗವೂ ತನ್ನ ಶಕ್ತ್ಯಾನುಸಾರ. ಧನ-ಧಾನ್ಯ-ವಸ್ತು ಇತ್ಯಾದಿಗಳನ್ನು ಹೊತ್ತು ತಂದು ಕೊಡುವುದೆ ಹೊರೆ ಕಾಣಿಕೆ. ಸಮಾಜಕ್ಕಾಗಿ ದೇವಾಲಯ ಎನ್ನುವ ಅರ್ಥ ಇದರಲ್ಲಿದೆ.

ಹೊರೆ ಕಾಣಿಕೆ ಅರ್ಪಿಸುವುದು ಒಂದು ಉತ್ಸವವೇ ಸರಿ. ಗೊತ್ತಾದ ವ್ರು ಅರ್ಪಿಸಬೇಕೆಂದಿರುವ ವಸ್ತುಗಳನ್ನು ತಲೆಯ ಮೇಲಿಟ್ಟುಕೊಂಡು ಣಿಗೆಯಲ್ಲಿ ದೇವಾಲಯಕ್ಕೆ ಬಂದು ಅರ್ಪಿಸುವುದು. ಮೆರವಣಿಗೆ ್ರತಿಕ ರೂಪ ಪಡೆದರೆ ಅದರಲ್ಲಿರುವುದು ಅಂತರ್ಯದ ಧಾರ್ಮಿಕ ತನ್ನು ಬಡಿದೆಬ್ಬಿಸುವ ಸಾಂಪ್ರದಾಯಿಕ ಶಕ್ತಿ.

ಸುಂದೇಶ್ವರ ದೇವಾಲಯದ ಬ್ರಹ್ಮಕಲಶೋತ್ಸವಕ್ಕಾಗಿ ಊರಿನ ಾಂದು ವರ್ಗವೂ ಅವಿತೋತ್ಸಾಹ ಮತ್ತು ಧರ್ಮ ಶ್ರದ್ಧೆಯಿಂದ ಕಾಣಿಕೆ ಅರ್ಪಿಸಿದವು. ಈ ಸಂಪ್ರದಾಯ ಬಹಳ ಹಿಂದಿನ ದಲೂ ನಡೆದು ಬಂದದ್ದಿರಬೇಕು. ಇದರ ಫಲವಾಗಿ ಅಭೂತಪೂರ್ವ ನಿಕ ಸಂತರ್ಪಣೆ. ಸುಮಾರು ಹತ್ತು ಸಾವಿರಕ್ಕೂ ಮಿಕ್ಕಿದ ಸಂಖ್ಯೆಯ ತಮ್ಮ ವರ್ಗ-ಅಂತಸ್ತುಗಳನ್ನು ಮರೆತು ಈ ಸಾರ್ವಜನಿಕ ನದಲ್ಲಿ ಪಾಲ್ಗೊಂಡಿದ್ದರು. ಒಂದು ಅಚ್ಚುಕಟ್ಟಾದ ವ್ಯವಸ್ಥೆ-ಕಾರಣೆಯಲ್ಲಿ ಇದು ನಡೆಯಿತು. ಇದೊಂದು ಅಭಿನಂದನೀಯ ಹಾಗು ಣೀಯ ಸಂಪ್ರದಾಯ.

## ಯ ಹಂತದ ಕಾರ್ಯ :

987ರಿಂದ ಎರಡನೆಯ ಹಂತದ ನವೀಕರಣ ಕಾರ್ಯ ಆರಂಭವಾಗಿದೆ. ್ರಕಾರದ ಮಹಾದ್ವಾರ, ಅದಕ್ಕೊಂದು ಸುಂದರವಾದ ಗೋಪುರ, ವಿಶಾಲವಾದ ಒಂದು ಅಂತಸ್ತಿನ ಚಂದ್ರಶಾಲೆ ನಿರ್ಮಾಣ, ಇದರಲ್ಲಿ, ಚಂದ್ರಶಾಲೆಯಲ್ಲಿ ಶ್ರೀ ಶಂಕರಕೃಪಾ ಪ್ರವಚನ ಮಂದಿರ ಮತ್ತು ದೇಶ್ವರ ಕಲ್ಯಾಣಮಂಟಪಗಳನ್ನು ಯೋಜಿಸಲಾಗಿದೆ. ಶೃಂಗೇರಿ ರದಾಪೀಠದ ಜಗದ್ಗುರು ಮಹಾಸ್ವಾಮಿಗಳವರು ಇದರ ಶಿಲಾನ್ಯಾಸ ತ್ತಾರೆ. ಅಲ್ಲದೆ ಶ್ರೀ ಶಂಕರಕೃಪಾ ಪ್ರವಚನ ಮಂದಿರದಲ್ಲಿ ವ ಸಲುವಾಗಿ ಸುಮಾರು [illegible] ವೆಚ್ಚದಲ್ಲಿ ದಲ್ಲಿ ನಿರ್ಮಿಸಲಾದ ಶಂಕರಾಚಾರ್ಯರ ಸುಂದರ ಅಮೃತ ಶಿಲಾ ಎರಡನ್ನು ನೋಡ [illegible] ಮಹಾದ್ವಾರ ಗೋಪುರ ಚಂದ್ರಶಾಲೆ ನಿರ್ಮಾಣ [illegible]

**ನಿಧಿಸಂಚಯನ :**

ಕುಂದೇಶ್ವರ ದೇವಾಲಯವನ್ನು ಸರ್ವಾಂಗ ಸುಂದರವನ್ನಾಗಿ ಮಾಡುವ ಕಾರ್ಯ ಇಲ್ಲಿ ನಡೆದಿದೆ. ಗರ್ಭಗೃಹ ಮತ್ತು ಒಳಪ್ರಾಕಾರದ ಪ್ರವೇಶದ್ವಾರ ಮಂಟಪಗಳು ಚಂದ್ರಕಾಂತಶಿಲೆಯ ಹೊದಿಕೆಯನ್ನು ಪಡೆದು ಶೋಭಿಸುತ್ತಿವೆ. ಹೊಸಪ್ರಾಕಾರದ ಕೆಲಸ ಈಗ ನಡೆಯುತ್ತಿದೆ. ಸುಮಾರು 15 ಲಕ್ಷ ರೂಪಾಯಿಗಳಿಗೂ ಅಧಿಕ ಮೊತ್ತದ ವಿನಿಯೋಗ ಕಾರ್ಯ ಇಲ್ಲಿ ನಡೆದಿರುವುದು. ಅಪಾರವಾದ ಧನ ಸಂಚಯ ಕಾರ್ಯ ಸುಲಭ ಸಾಧ್ಯವಾದುದೇನಲ್ಲ. ಕುಂದೇಶ್ವರ ಸಾಮಾನ್ಯನೆ ! ಭಕ್ತಾದಿಗಳ ಕೊಡುಗೆ ಅಸಾಧ್ಯವನ್ನು ಸಾಧ್ಯವನ್ನಾಗಿಸಿದೆ. ಕೆಲವರು ಭಕ್ತಾದಿಗಳು ಹೆಚ್ಚು ವೆಚ್ಚದ ಪ್ರತ್ಯೇಕ ಕೆಲಸಗಳನ್ನು ವಹಿಸಿಕೊಂಡು ದೇವರ ಸೇವೆ ಮಾಡಿರುತ್ತಾರೆ. ಇನ್ನು ಕೆಲವರು ಉದಾರ ಮನಸ್ಸಿನಿಂದ ಶಕ್ತಿ ಮೀರಿ ಧನ ಸಹಾಯ ಮಾಡಿರುತ್ತಾರೆ. ಈ ಎಲ್ಲಾ ಕೊಡುಗೈ ದಾನಿಗಳನ್ನು ಇಲ್ಲಿ ಸ್ಮರಿಸಬೇಕು.

**ಅರ್ಪಣೆ :**

ದೇವಾಲಯದ ಪುನರ್ನಿರ್ಮಾಣಕ್ಕೆ ಧನದ ಕೊಡುಗೆ ಬರುತ್ತಿರುವಂತೆಯೇ ಕುಂದೇಶ್ವರನಿಗೂ ಹಲವು ರೀತಿಯ ವಸ್ತುಗಳ ಅರ್ಪಣೆ ಆಗಿವೆ. ಕುಂದೇಶ್ವರನ ಬೆಳ್ಳಿ ಮುಖವಾಡ (ತಿಟ್ಟಮನೆ ನರಸಿಂಹ ಹೊಳ್ಳರಿಂದ) ಪಾಣಿಪೀಠಕ್ಕೆ ಬೆಳ್ಳಿಯ ಹೊದಿಕೆ (ಪಡುಕೋಣೆ ನರಸಿಂಹ ನಾವಡರಿಂದ) ಕುಂದೇಶ್ವರನ ಉತ್ಸವ ಮೂರ್ತಿಗೆ ಬೆಳ್ಳಿಯ ಕವಚ (ಕೆ. ಸುರೇಶ ಶೇರ್‌ರವರಿಂದ) ಗಣಪತಿಗೆ ಬೆಳ್ಳಿಯ ಮುಖವಾಡ ಮತ್ತು ಕಿರೀಟ, ಅಮ್ಮನವರಿಗೆ ಚಿನ್ನದ ಹಾರ ಮತ್ತು ಕುಂದೇಶ್ವರನಿಗೆ ಬಂಗಾರದ ಎಲೆಯಲ್ಲಿ ಸುತ್ತಿದ್ದ ರುದ್ರಾಕ್ಷಿಸರ (ಶ್ರೀಮತಿ ಜಿ. ಸೀತಾಬಾಯಿರಾವ್‌ರವರಿಂದ)– ಇವು ಮುಖ್ಯವಾದ ಕೊಡುಗೆಗಳು.

**ಶಾಶ್ವತ ನಿತ್ಯಪೂಜಾನಿಧಿ ಯೋಜನೆ :**

ಕುಂದೇಶ್ವರ ದೇವಾಲಯದಲ್ಲಿ ನಿತ್ಯಪೂಜಾದಿ ಕಾರ್ಯಗಳನ್ನು ನಡೆಸಲು ಅರ್ಚಕರಿದ್ದಾರೆ. ಸರಕಾರದಿಂದ ಈ ದೇವಾಲಯಕ್ಕೆ ಬರತಕ್ಕ

ತಸದೀಕು ವರ್ಷಕ್ಕೆ ಕೇವಲ 130/–ರೂಪಾಯಿಗಳು ಮಾತ್ರ. ಆದರೆ ತ್ರಿಕಾಲ ಪೂಜೆ ಶೈವಾಗಮವಿಧಿಯಂತೆ ಪ್ರತಿನಿತ್ಯ ತಪ್ಪದೆ ನಡೆಯುತ್ತಿದೆ. ಶಿವರಾತ್ರಿ ಉತ್ಸವ, ಶ್ರಾವಣಪೂಜೆ (ಸೋಣೆ ಆರತಿ), ಕಾರ್ತಿಕ ದೀಪೋತ್ಸವ–ಎಲ್ಲವೂ ಅತ್ಯಂತ ವಿಜೃಂಭಣೆಯಿಂದಲೇ ನೆರವೇರುತ್ತಿವೆ. ಎಲ್ಲವೂ ಭಕ್ತರ ಸಹಕಾರದಿಂದ.

ಪೂಜಾವಿಧಿಗಳು ಕ್ರಮಪ್ರಕಾರ ನೆರವೇರುತ್ತಿದ್ದರೂ ಹಣದ ಕೊರತೆಯ ಚಿಂತೆ, ಆಡಳಿತ ಮಂಡಳಿಗೆ. ವರ್ಷದಿಂದ ವರ್ಷಕ್ಕೆ ಇದು ಏರುಗತಿಯಲ್ಲೇ ಮುಂದುವರೆದಿದೆ. ಸಮಸ್ಯೆಗೆ ಪರಿಹಾರವೆಂಬಂತೆ ಮತ್ತು ದೇವರ ಪೂಜಾ ಕಾರ್ಯಗಳಿಗೆ ತೊಂದರೆಯಾಗದಿರಲೆಂಬ ಉದ್ದೇಶದಿಂದ 'ಶಾಶ್ವತ ನಿತ್ಯ ಪೂಜಾನಿಧಿ' ಎಂಬ ಯೋಜನೆಯನ್ನು ಆಡಳಿತಮಂಡಳಿ ಪ್ರಾರಂಭಿಸಿದೆ. ಈ ಯೋಜನೆಯಡಿ ಭಕ್ತರು ಶಾಶ್ವತಪೂಜೆಗೆ 501/-ರೂಪಾಯಿಗಳನ್ನು ದೇಣಿಗೆ ನೀಡಬೇಕು. ಇದರ ಬಡ್ಡಿಯ ಹಣದಿಂದ ಪ್ರತಿವರ್ಷದಲ್ಲಿ ಒಂದು ದಿನ ಅವರ ಹೆಸರಿನಲ್ಲಿ ಕುಂದೇಶ್ವರ ಮತ್ತು ಪರಿವಾರ ದೇವತೆಗಳಿಗೆ ತ್ರಿಕಾಲಪೂಜೆ ಸಲ್ಲಿಸಲಾಗುವುದು. ಶೃಂಗೇರಿ ಶಾರದಾಪೀಠದ ಜಗದ್ಗುರು ಶ್ರೀ ಶ್ರೀಮದಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳವರು ಈ ಯೋಜನೆಯನ್ನು ಉದ್ಘಾಟಿಸಿ ಆಶೀರ್ವದಿಸಿರುತ್ತಾರೆ. ಯೋಜನೆ ಈಗ ತುಂಬ ಜನಪ್ರಿಯವಾಗಿದೆ.

## ಕುಂದೇಶ್ವರ ಕಲ್ಯಾಣ ಮಂಟಪ ಯೋಜನೆ:

ಶ್ರೀ ಶಂಕರಕೃಪಾ ಪ್ರವಚನ ಮಂದಿರ, ಕುಂದೇಶ್ವರ ಕಲ್ಯಾಣಮಂಟಪ, ಮಹಾದ್ವಾರ ಮತ್ತು ಸುಂದರ ಗೋಪುರ ನಿರ್ಮಾಣ ಅವಶ್ಯ ಆಗಬೇಕಾದದ್ದು. ಹಾಗೆಂದೇ ಕೆಲಸ ಪ್ರಾರಂಭಿಸಲಾಗಿದೆ. ಇದಕ್ಕೆ ತಗಲುವ ಅಪಾರವೆಚ್ಚಕ್ಕೆ ನೂರಾರು ಸಹಾಯ ಹಸ್ತಗಳು ಬೇಕು. ಇದಕ್ಕಾಗಿ ಯೋಜನೆಯೊಂದು ರೂಪುಗೊಂಡಿದೆ. ಅದೇನೆಂದರೆ ಕಟ್ಟಡ ರಚನೆಗಾಗಿ ಭಕ್ತರು 5000/–ರೂಪಾಯಿ ಮತ್ತು ಮೇಲ್ಪಟ್ಟ ದೇಣಿಗೆ ನೀಡುವುದು. ಕಲ್ಯಾಣಮಂಟಪ ಪೂರ್ಣಗೊಂಡ ಮೇಲೆ ಐದು ಸಾವಿರ ರೂಪಾಯಿ ದೇಣಿಗೆ ಕೊಟ್ಟವರು ಅವರ ಕುಟುಂಬದ ಉಪನಯನ, ವಿವಾಹ–ಇತ್ಯಾದಿ ಶುಭಕಾರ್ಯಗಳಿಗಾಗಿ ಒಂದು ದಿನ ಈ ಕಲ್ಯಾಣ ಮಂಟಪವನ್ನು ಉಪಯೋಗಿಸಬಹುದು. ಹತ್ತು ಸಾವಿರ

ರೂಪಾಯಿಗಳನ್ನು ನೀಡಿದಲ್ಲಿ ಎರಡು ದಿನ; ಅಂತೆಯೇ ಅವರು ನೀಡುವ ಪ್ರತಿ ಐದುಸಾವಿರ ರೂಪಾಯಿಗಳಿಗೆ ಒಂದೊಂದು ದಿನದಂತೆ ಕಲ್ಯಾಣ ಮಂಟಪವನ್ನು ಸ್ಥಳಬಾಡಿಗೆ ರಹಿತವಾಗಿ ಒದಗಿಸಲಾಗುವುದು. ಐದು ಸಾವಿರ ಮತ್ತು ಅದಕ್ಕೆ ಮೇಲ್ಪಟ್ಟು ಹಣ ದೇಣಿಗೆ ನೀಡುವವರ ಹೆಸರನ್ನು ಅಮೃತ ಶಿಲಾಫಲಕದಲ್ಲಿ ಬರೆಸಿ ಇಡಲಾಗುವುದು. ಇಪ್ಪತ್ತೈದು ಸಹಸ್ರ ಮತ್ತು ಅದಕ್ಕೆ ಮೇಲ್ಪಟ್ಟು ಹಣ ದೇಣಿಗೆ ನೀಡುವವರ ಭಾವಚಿತ್ರವನ್ನು ಕಲ್ಯಾಣ ಮಂಟಪದಲ್ಲಿ ಇಡಲಾಗುವುದು. ಕುಂದಾಪುರ ಕರ್ನಾಟಕ ಬೇಂಕಿನಲ್ಲಿರುವ ಜೀರ್ಣೋದ್ಧಾರ ಸಮಿತಿಯ ಎಸ್. ಬಿ. ಖಾತೆ ನಂ. 2401ಕ್ಕೆ ಹಣಕೊಟ್ಟು ಕೋಶಾಧಿಕಾರಿಗಳಿಂದ ರಶೀದಿ ಪಡೆಯಬಹುದು. ಇದೇ ಬೇಂಕಿನಲ್ಲಿ ಸಮಿತಿಯ ಹೆಸರಿನಲ್ಲಿ ಸಿ. ಡಿ. ಖಾತೆ ತೆರೆದು ಪ್ರತಿ ತಿಂಗಳೂ ಕಂತು ಪ್ರಕಾರ ಹಣ ಕಟ್ಟುವ ವ್ಯವಸ್ಥೆಯೂ ಇದೆ. (ವಿವರಗಳಿಗೆ ಕಾರ್ಯದರ್ಶಿಗಳನ್ನು ಸಂಪರ್ಕಿಸಬಹುದು)

**ಆದಾಯ ತೆರಿಗೆ ವಿನಾಯ್ತಿ:**

ಕುಂದೇಶ್ವರ ದೇವಾಲಯಕ್ಕೆ ನೀಡುವ ಎಲ್ಲಾ ದೇಣಿಗೆಗಳಿಗೆ ಆದಾಯ ತೆರಿಗೆ ವಿನಾಯ್ತಿ ಇದೆ. 80 (ಜಿ) ನಂ. 5663 ಎಫ್ 176/79/82-11 (ಎ1) ತಾ. 25-4-1984ರ ಸರ್ಕಾರದ ಆದೇಶದ ಪ್ರಕಾರ ಈ ವಿನಾಯಿತಿ. 'ತೆರಿಗೆ'ಕಟ್ಟುವವರು 'ದೇಣಿಗೆ'ನೀಡಿ ಉಪಕೃತರಾಗಬಹುದು. ದೇವಕಾರ್ಯ, ಸ್ವಲಾಭ-ಎರಡೂ ಈ ವಿನಾಯ್ತಿ ಅನುಭವಿಸುವುದರಿಂದ ಉಂಟಾಗುತ್ತದೆ.

**ಮುಂದಿನ ಯೋಜನೆಗಳು :**

ದೇವಾಲಯದ ಮುಂದಿನ ವಿಶಾಲವಾದ ಕೆರೆ ತೀರ ದುಸ್ಥಿತಿಯಲ್ಲಿದೆ. ಇದರ ದುರಸ್ಥಿ-ಸಂರಕ್ಷಣೆ ಆಗಬೇಕು. ಪ್ರತಿವರ್ಷವೂ ವೈಭವದಿಂದ ಉತ್ಸವಾದಿಗಳು ನಡೆಯುವ ಈ ದೇವಾಲಯಕ್ಕೆ ಬ್ರಹ್ಮರಥವೊಂದರ ಅವಶ್ಯಕತೆ ಇದೆ. ಇದರ ನಿರ್ಮಾಣ ಹಾಗೂ ಇದಕ್ಕೆ ರಕ್ಷಣಾಗೃಹ(ರಥದ ಕೊಟ್ಟಿಗೆ)ಆಗಬೇಕಾಗಿದೆ.ಅರ್ಚಕರಿಗೆ ವಾಸದ ಮನೆ,ಒಳಪೌಳಿಯ ನವೀಕರಣ, ಫ್ಲೋರಸ್ಥುತ್ತಿನ ಪ್ರಾಕಾರದ ನೆಲಕ್ಕೆ ಕಲ್ಲು ಚಪ್ಪಡಿ ಹಾಸಿ ಅಂಗಣವನ್ನು ದೃಢ ಹಾಗೂ ಸ್ವಚ್ಛಗೊಳಿಸುವುದು-ಇವೆಲ್ಲ ಸಮಿತಿಯ ಮುಂದಿರುವ

ಮುಂದಿನ ಯೋಜನೆಗಳು. ಈ ನಿಟ್ಟಿನಲ್ಲಿ ಆಡಳಿತ ಮೊಕ್ತೇಸರರು ಹಾಗೂ ಸಮಿತಿಯವರ ವಿನಂತಿಯೇನೆಂದರೆ 'ಈ ದೇವಾಲಯ ಊರ ಭಕ್ತಾದಿಗಳೆಲ್ಲರ ಪ್ರಾರ್ಥನೆಯ ಪವಿತ್ರ ತಾಣ; ಸಂಸ್ಕೃತಿಯ ಪ್ರತೀಕ. ಈ ಸಾರ್ವಜನಿಕ ಪ್ರಾರ್ಥನಾ ಮಂದಿರ ಚೆನ್ನಾಗಿದ್ದರೆ ಅದು ಇಡೀ ಊರಿಗೇ ಭೂಷಣ; ಎಲ್ಲರಿಗೂ ಶ್ರೇಯಸ್ಸು; ಈ ದೇವಾಲಯದ ನವನಿರ್ಮಾಣ ಕಾರ್ಯವನ್ನು ಎಲ್ಲರೂ ಸೇರಿ ಮಾಡಿ ಶ್ರೇಯೋವಂತರಾಗೋಣ'.

## ಯತಿ–ಸಾಧು–ಸಂತರ ಭೇಟಿ :

ಋಷಿ-ಮುನಿಗಳು, ಸಾಧು-ಸಂತರು ತಮ್ಮ ಯೋಗ ಸಾಧನೆಗಳಿಂದ ಸುಲಭ ಗ್ರಾಹ್ಯವಲ್ಲದ ಪ್ರತಿಭೆ, ಪ್ರಭಾವಲಯಗಳನ್ನು ಬೆಳೆಸಿಕೊಂಡಿರುತ್ತಾರೆ. ಇದರ ಪ್ರಭಾವ ಇವರು ಹೋದೆಡೆಯಲ್ಲೆಲ್ಲಾ. ದೇವಾಲಯಗಳಲ್ಲಿ ದೇವರ ಪ್ರಭಾವಲಯ, ಶಾಸ್ತ್ರೋಕ್ತಪೂಜೆ, ಉತ್ಸವಾದಿಗಳು, ಕಾಲ-ಕಾಲಕ್ಕೆ ಅಷ್ಟ ಬಂಧ-ಬ್ರಹ್ಮಕಲಶಗಳು ದೇವಶಕ್ತಿಯ ಪ್ರಭೆಯನ್ನು ನಿರಂತರ ನೆಲೆಗೊಳಿಸ ಬಲ್ಲವು. ಕೆಲವು ದೇವಾಲಯಗಳಲ್ಲಿ ಭಕ್ತರಿಗೆ ಆನಂದ, ಭಾವಸಮಾಧಿಯ ಅನುಭವ ಆಗುವುದು ಈ ಕಾರಣದಿಂದಲೇ. ಇಂತಹ ಕ್ಷೇತ್ರಗಳಿಗೆ ಯತಿಗಳು, ಸಾಧು-ಸಂತರು ಭೇಟಿ ನೀಡಿದರೆ ಅವುಗಳ ಅಗೋಚರ ಆದರೆ ಅನುಭವವೇದ್ಯ ಶಕ್ತಿ ವೃದ್ಧಿಸುತ್ತದೆ. ಕುಂದಾಪುರ ಸಮಾಜಕ್ಕೆ ಇದರ ಅನುಭವ ಆಗಿಂದಾಗ್ಗೆ. ಇದು ಕುಂದೇಶ್ವರನಿಂದಾಗಿ. ಈ ದೇವಾಲಯಕ್ಕೆ ಹಲವಾರು ಜನಯತಿ ವರೇಣ್ಯರು, ಸಾಧು-ಸಂತರು ಭೇಟಿ ಇತ್ತು ಕ್ಷೇತ್ರವನ್ನು ಪುನೀತಗೊಳಿಸಿದ್ದಾರೆ. ಅವರುಗಳೆಂದರೆ ಶೃಂಗೇರಿ ಶ್ರೀ ಶಾರದಾಪೀಠದ ಜಗದ್ಗುರು ಶ್ರೀಮದಭಿನವ ವಿದ್ಯಾತೀರ್ಥಮಹಾಸ್ವಾಮಿಗಳವರು ಹಾಗೂ ಅವರ ಕರಕಮಲಸಂಜಾತರಾದ ಶ್ರೀ ಶ್ರೀ ಭಾರತಿತೀರ್ಥಮಹಾಸ್ವಾಮಿಗಳವರು, ಹರಿಹರಪುರ ಶ್ರೀಮಠದ ಶ್ರೀ ಶ್ರೀಮದಭಿನವ ರಾಮಾನಂದಸರಸ್ವತೀಸ್ವಾಮಿಗಳವರು, ಬಾಳ್ಕುದ್ರು ಮಠದ ಶ್ರೀ ಶ್ರೀ ಶಂಕರಾಶ್ರಮಸ್ವಾಮಿಗಳವರು, ಎಡನೀರುಮಠದ ಶ್ರೀ ಶ್ರೀ ಕೇಶವಾನಂದಭಾರತೀಸ್ವಾಮಿಗಳವರು, ವರದಹಳ್ಳಿಯ ಶ್ರೀ ಶ್ರೀ ಶ್ರೀಧರಸ್ವಾಮಿಗಳವರು, ಬೆಂಗಳೂರು ಶ್ರೀ ಶಂಕರಮಠದ ಶ್ರೀ ಶ್ರೀ ವರ್ಧಮಾನಾನಂದಭಾರತೀಸ್ವಾಮಿಗಳವರು, ಮಲ್ಲಾಡಿಹಳ್ಳಿಯ ಶ್ರೀ ರಾಘವೇಂದ್ರ ಗುರೂಜಿ, ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶತೀರ್ಥರು, ಸುಬ್ರಹ್ಮಣ್ಯ

ಮಠದ ಶ್ರೀ ವಿದ್ಯಾಭೂಷಣತೀರ್ಥರು, ಕಂಚಿಕಾಮಕೋಟಿಪೀಠದ ಶ್ರೀ ಶ್ರೀ ಜಯೇಂದ್ರಸರಸ್ವತಿಸ್ವಾಮಿಗಳವರು, ಉಡುಪಿ ಫಲಿಮಾರು ಮಠದ ಕಿರಿಯ ಶ್ರೀಪಾದಂಗಳವರು, ಧರ್ಮಸ್ಥಳ ಶ್ರೀಗುರುದೇವ ಆಶ್ರಮದ ಶ್ರೀ ಸ್ವಾಮಿ ಆತ್ಮಾನಂದಸರಸ್ವತಿಗಳು ಮತ್ತು ಹರೇಕೃಷ್ಣಪಂಥದ (ನ್ಯೂಯಾರ್ಕ್.ಯು. ಎಸ್. ಎ.) ಸ್ವಾಮಿಹೃಷೀಕೇಶಾನಂದರು.

**ಸಾಂಸ್ಕೃತಿಕ ಕೇಂದ್ರ :**

ಕುಂದೇಶ್ವರ ದೇವಾಲಯ ಕೇವಲ ಒಂದು ಧಾರ್ಮಿಕ ಕೇಂದ್ರವಾಗೇ ಉಳಿದಿಲ್ಲ. ಧರ್ಮದ ನೆಲಗಟ್ಟಿನಲ್ಲಿ ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸುವ ಒಂದು ಉತ್ತಮ ಸಾಂಸ್ಕೃತಿಕ ಕೇಂದ್ರವಾಗಿಯೂ ರೂಪುಗೊಂಡಿದೆ. ಇದಕ್ಕೆ ಪ್ರತೀಕವಾಗಿ ಹಲವಾರು ಸಂಘಸಂಸ್ಥೆಗಳು ಇಲ್ಲಿ ಕಾರ್ಯವೆಸಗುತ್ತಿವೆ. ದೇವಾಲಯದಲ್ಲಿ ಈ ಹಿಂದೆ 'ಕುಂದೇಶ್ವರ ಮಿತ್ರಮಂಡಳಿ', 'ಕುಂದೇಶ್ವರ ಯಕ್ಷಗಾನ ಸಂಘ', 'ಕುಂದೇಶ್ವರ ಸಾಂಸ್ಕೃತಿಕ ಸಭಾ'- ಮೊದಲಾದ ಸಂಸ್ಥೆಗಳು" ಬಗೆ-ಬಗೆಯ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಿ ಜನಮೆಚ್ಚುಗೆ ಗಳಿಸಿವೆ. 1980ರಲ್ಲಿ ಅಸ್ತಿತ್ವಕ್ಕೆ ಬಂದ ಶ್ರೀಕುಂದೇಶ್ವರ ಯುವಜನಸಭಾ ಹತ್ತು-ಹಲವು ಯುವಚಟುವಟಿಕೆಗಳನ್ನು ಯಶಸ್ವಿಯಾಗಿ ನಡೆಸುತ್ತಿದೆಯಲ್ಲದೆ, ಪುಸ್ತಕಪ್ರಕಟಣೆಯಂತಹ ರಚನಾತ್ಮಕ ಕಾರ್ಯಗಳನ್ನು ಕೈಗೊಳ್ಳುತ್ತಿದೆ. 1980ರಲ್ಲೇ ಆರಂಭಗೊಂಡ ಮತ್ತೊಂದು ಸಂಸ್ಥೆ 'ಶ್ರೀಕುಂದೇಶ್ವರ ಸಾರ್ವಜನಿಕ ಗಣೇಶೋತ್ಸವ ಸಮಿತಿ'. ಇದೊಂದು ರಿಜಿಸ್ಟರ್ ಆದ ಸಂಸ್ಥೆ. ಇದರ ಆಶ್ರಯದಲ್ಲಿ ವರ್ಷಂಪ್ರತಿ ಗಣೇಶೋತ್ಸವವನ್ನು ವಿವಿಧ ಧಾರ್ಮಿಕ-ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ಆಚರಿಸಲಾಗುತ್ತಿದೆ.

1983ರಲ್ಲಿ 'ಯಕ್ಷಸಂಗಮ' ಇಲ್ಲಿ ಆರಂಭವಾಯಿತು. ಇದು ಪ್ರತಿವರ್ಷ ದೇವಾಲಯದ ಆವರಣದಲ್ಲಿ ಆಸಕ್ತ ಯುವಜನರಿಗೆ ಯಕ್ಷಗಾನ ತರಬೇತಿ ನೀಡುತ್ತಿದೆ. ಅಲ್ಲದೆ ಆಗಿಂದಾಗ್ಗೆ ಯಕ್ಷಗಾನ ಬಯಲಾಟ-ತಾಳಮದ್ದಳೆ ಕಾರ್ಯಕ್ರಮಗಳನ್ನೂ ನೀಡುತ್ತಿದೆ.

'ಶ್ರೀಕುಂದೇಶ್ವರ ಭಜನಾ ಮಂಡಳಿ'ಯು 1985ರಿಂದ ಪ್ರತಿ ಸೋಮ-ವಾರ ಮತ್ತು ಇತರ ವಿಶೇಷದಿನಗಳಲ್ಲಿ ಭಜನಾಕಾರ್ಯಕ್ರಮ ಏರ್ಪಡಿಸು-

ತ್ತಿದೆ. 1988ರಲ್ಲಿ 'ಕುಂದಕಲಾವೃಂದ' ಆರಂಭಗೊಂಡಿದೆ. ಇದು ಪ್ರತಿ-ವರ್ಷ ಶಿವರಾತ್ರಿ ಮತ್ತಿತರ ವಿಶೇಷ ಸಂದರ್ಭಗಳಲ್ಲಿ ಸಂಗೀತ, ನೃತ್ಯ, ನಾಟಕ ಮೊದಲಾದ ಕಾರ್ಯಕ್ರಮಗಳನ್ನು ಏರ್ಪಡಿಸುವ ಯೋಜನೆ ಹೊಂದಿದೆ. ಇತ್ತೀಚೆಗೆ ಕೆಲವು ವರ್ಷಗಳಿಂದ 'ಶ್ರೀ ವಾಮದೇವಕೃಪಾಷ್ಟಕಂ ನಿಧಿ'ಯ ಆಶ್ರಯದಲ್ಲಿ ಶ್ರೀ ಶಂಕರಜಯಂತಿ ಉತ್ಸವವನ್ನು ಆಚರಿಸಲಾಗುತ್ತಿದೆ. ಹಲವು ವರ್ಷಗಳ ಕಾಲ ಇಲ್ಲಿ ಭಜನಾಸಪ್ತಾಹವೂ ವೈಭವದಿಂದ ನಡೆದಿತ್ತೆನ್ನುವುದು ಹಿರಿಯರ ಅಂಬೋಣ.

ದೇವಾಲಯವೂ ಸಹ ಆಗಿಂದಾಗ್ಗೆ ಕೆಲವು ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದೆ. ಅದರಲ್ಲಿ ಪ್ರಮುಖವಾದುದು ಕಾರ್ತಿಕದೀಪೋತ್ಸವದಂದು ನಡೆಯುವ ದೀಪಾಲಂಕಾರ ಸ್ಪರ್ಧೆ. ಇದೊಂದು ಅತ್ಯಂತ ಜನಪ್ರಿಯ ಸ್ಪರ್ಧೆ. ಅಲ್ಲದೆ ದೇವಾಲಯದಲ್ಲಿ ಪ್ರತಿವರ್ಷ ಋಗುಪಾಕರ್ಮ, ಭಿಕ್ಷಾದಿಗಳ ವೈಯಕ್ತಿಕ ಹೋಮ-ಹವನಗಳು, ಮದುವೆ-ಮುಂಜಿಯಂತಹ ಶುಭಕಾರ್ಯಗಳೂ ಸಹ ನಡೆಯುತ್ತವೆ.

ಒಂದು ದೇವಾಲಯ ಸಮಾಜಕ್ಕೆ ಯಾವರೀತಿ ಅತಿ ಉಪಯುಕ್ತವಾಗಬಲ್ಲುದು ಎನ್ನುವುದು ಸಮಾಜ ಅದನ್ನು ಯಾವರೀತಿಯಲ್ಲಿ ನಡೆಸಿಕೊಂಡು ಬರುತ್ತಿದೆ ಎಂಬುದನ್ನು ಅವಲಂಬಿಸಿದೆ. ಸತ್ಯ[illegible]ಜೋತ್ಸವಗಳು ಮತ್ತು ಹಲವಾರು ಸಂಘ ಸಂಸ್ಥೆಗಳನ್ನು ಮೇಳೈಸಿಕೊಂಡಿರುವ ಶ್ರೀ ಕುಂದೇಶ್ವರ ದೇವಾಲಯ ಕುಂದಾಪುರ ಸಮಾಜದ ಆಚಾರ-ವಿಚಾರಗಳಿಗೆ ಒಂದು ಕನ್ನಡಿಯಾಗಿದೆ. ಇಲ್ಲೊಂದು ಅಪೇಕ್ಷಣೀಯ ಹಾಗೂ ಅನುಕರಣೀಯ ಪದ್ಧತಿ ಬೆಳೆದು ಬಂದಿದೆ.

## ಸ್ವಾತಂತ್ರ್ಯಾನಂತರದ ಕೆಲವು ಪ್ರಮುಖ ಘಟನೆಗಳು :

1. **ಅಷ್ಟಬಂಧ ಪ್ರತಿಷ್ಠಾ ಮಹೋತ್ಸವ :**
   ಪ್ಲವನಾಮ ಸಂವತ್ಸರದ ಫಾಲ್ಗುಣ ಶುದ್ಧ ಷಷ್ಠಿ ಭಾನುವಾರದಿಂದ ನವಮಿ ಬುಧವಾರದ ವರೆಗೆ (11-3-1962ರಿಂದ 14-3-1962)

2. **ಜೀರ್ಣೋದ್ಧಾರ ಕಾರ್ಯಕ್ಕೆ ಶಿಲಾನ್ಯಾಸ :**
ದುಂದುಭಿ ನಾಮ ಸಂವತ್ಸರದ ಚೈತ್ರ ಬಹುಳ ಷಷ್ಠಿ ಬುಧವಾರ, (14-4-1982)

3. **ಒಳಹೆಬ್ಬಾಗಿಲು ಕಟ್ಟಡಕ್ಕೆ ಶಿಲಾನ್ಯಾಸ :**
ರುಧಿರೋದ್ಗಾರಿ ಸಂವತ್ಸರದ ಮಾಘ ಬಹುಳ ತ್ರಯೋದಶಿ,ಬುಧವಾರ (29–2–1984)

4. **ಕಲ್ಯಾಣ ಮಂಟಪ ಮತ್ತು ಶ್ರೀ ಶಂಕರಕೃಪಾ ಕಟ್ಟಡಕ್ಕೆ ಶಿಲಾನ್ಯಾಸ :**
ರಕ್ತಾಕ್ಷಿನಾಮ ಸಂವತ್ಸರದ ಜ್ಯೇಷ್ಠ ಬಹುಳ ಅಷ್ಟಮಿ, ಗುರುವಾರ (21–6–1984)

5. **ಶ್ರೀ ಕುಂದೇಶ್ವರ ಬ್ರಹ್ಮಕಲಶ ಮತ್ತು ಗಣಪತಿ ಹಾಗೂ ಅನ್ಯಾನವರ ವಿಗ್ರಹಗಳ ಪ್ರತಿಷ್ಠೆ ಮತ್ತು ಅಷ್ಟಬಂಧ ಮಹೋತ್ಸವ :**
ಕ್ರೋಧನ ಸಂವತ್ಸರದ ವೈಶಾಖಶುದ್ಧ ಬಿದಿಗೆ ಸೋಮವಾರದಿಂದ ಪಂಚಮಿ ಗುರುವಾರದವರೆಗೆ (22–4–1985ರಿಂದ 25–4–1985)

6. **ಕಲ್ಯಾಣ ಮಂಟಪ ಮತ್ತು ಶ್ರೀ ಶಂಕರಕೃಪಾ ಕಟ್ಟಡ ಕೆಲಸದ ಆರಂಭ :**
ಪ್ರಭವ ನಾಮ ಸಂವತ್ಸರದ ಆಷಾಢಶುದ್ಧ ಚೌತಿ, ಮಂಗಳವಾರ (30–6–1987)



ಶೃಂಗೇರಿ ಶ್ರೀ ಶಾರದಾ ಪೀಠದ ಹಿರಿಯ ಜಗದ್ಗುರು ಬ್ರಹ್ಮೀಭೂತ
ಶ್ರೀ ಶ್ರೀಮದಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳು ಶ್ರೀ ಕುಂದೇಶ್ವರನಿಗೆ
ಪೂಜೆ ಸಲ್ಲಿಸಿ ಪ್ರಾರ್ಥಿಸುತ್ತಿರುವುದು.



ಶೃಂಗೇರಿ ಶ್ರೀ ಶಾರದಾಪೀಠದ ಜಗದ್ಗುರು ಶ್ರೀ ಶ್ರೀ ಭಾರತೀತೀರ್ಥ ಮಹಾಸ್ವಾಮಿ ಗಳವರು ಶ್ರೀಕಂಠೇಶ್ವರನಿಗೆ ಪೂಜೆ ಸಲ್ಲಿಸುತ್ತಿರುವುದು.



1985ರಲ್ಲಿ ಪ್ರತಿಷ್ಠೆಗೊಂಡ ಶ್ರೀ ಮಹಾಗಣಪತಿ



1985ರಲ್ಲಿ ಪ್ರತಿಷ್ಠೆಗೊಂಡ ಶ್ರೀ ಅಮ್ಮನವರು.



ಶ್ರೀ ಕುಂದೇಶ್ವರ ದೇವರ ಎದುರು ಸ್ಥಾಪನೆಗೊಂಡ ಕಲಾತ್ಮಕ ನಂದಿಯ ವಿಗ್ರಹ.



1985 ರಲ್ಲಿ ನಿರ್ಮಾಣಗೊಂಡ ನೂತನ ಗರ್ಭಗುಡಿ



ನವ ನಿರ್ಮಾಣಗೊಂಡ ದೇವಾಲಯದ ಒಳ ಹೆಬ್ಬಾಗಿಲ ಕಟ್ಟಡ.



ದಿ. ಕೆ. ವಾಸಪ್ಪನವರ ಸ್ಮರಣಾರ್ಥ ಅವರ ಸಹೋದರ ಶ್ರೀ ಕೆ. ಶ್ರೀನಿವಾಸ ರಾವ್ ಮುಂಬಯಿ–ಇವರು ನಿರ್ಮಿಸಿಕೊಟ್ಟ ಪ್ರವೇಶದ್ವಾರ.



ಶೃಂಗೇರಿ ಜಗದ್ಗುರು ಶ್ರೀ ಶ್ರೀಭಾರತೀತೀರ್ಥ ಮಹಾಸ್ವಾಮಿಗಳವರು
ಶ್ರೀ ಶಂಕರಕೃಪಾ ಪ್ರವಚನ ಮಂದಿರ ಮತ್ತು ಶ್ರೀ ಕುಂದೇಶ್ವರ ಕಲ್ಯಾಣ
ಮಂಟಪಕ್ಕೆ ಶಿಲಾನ್ಯಾಸ ಮಾಡುತ್ತಿರುವುದು.

# ಶಾಸನಗಳು

## ೧: ಆಳುಪರಾಜ ವೀರಪಾಂಡ್ಯ ದೇವನ ಶಾಸನ
(ಕುಂದೇಶ್ವರ ದೇವಾಲಯದ ಹೊರಪ್ರಾಕಾರದಲ್ಲಿರುವ ಶಿಲಾಫಲಕ)

1 ಶ್ರೀಗಣಾಧಿಪತಯೇ(ಂ) ನಮಃ । ಸ್ವಸ್ತಿ ಶ್ರೀ–
2 ಮತ್ಪಟಮಹಾದೇವಿಯ್ಯರುಂ ಶ್ರೀಮತ್ಪಾಂಡ್ಯದೇವಾ–
3 ಳ್ವೇಂದ್ರ ದೇವರಸರ ವಿಜಯ ರಾಜ್ಯಮುತ್ತರೋತ್ತ–
4 ರಾಭಿವೃದ್ಧಿ ಪ್ರವರ್ಧಮಾನ ಮಾಚಂದ್ರಾರ್ಕ್ಕ–
5 ತಾರಂಬರಂ ಸಲುತಮಿರ್ದ ಸಕವರುಷದ
6 ೧೧೮೪ ದುಂದುಭಿ ಸಂವತ್ಸರದ ಶ್ರಾವಣ
7 ಬಹುಳ ೧೩ ಆದಿವಾರ ಸಿಂಹ್ಮ ಮಾಸ ೧೬ಆ ।
8 ಶ್ರೀಮದುರಾಜಧಾನಿ ಬಾರಹಕಂನ್ಯಾ–
9 ಪುರದರಮನೆಯಲು ಸ್ಥಿರ ಸಿಹ್ಮಾಸನಾ–
10 ರೂಢರಾಗಿ ವಡ್ಡೋಲಗಂ ಗೊಟ್ಟಿರಲು
11 ಶ್ರೀಪಾದ ಸಂನಿಧಾನದಲು ಮೊಡ್ಡಮದೇ–
12 ವ ನರಸಿಂಹ ಹೆಗ್ಗಡೆ ಕೋಟಿಯಡಹ
13 ಲ್ಲ ಖಿಯ ಸೇನಬೋವ ಯಧಿಕಾರಿತಿನ್ನಾಚೆವುಂ
14 ದೇಸಿಪುರುಷರು ಯಿರಲು ಕುಂದಾಪು–
15 ರದ ಗ್ರಾಮಕೆವರುಷ ವೊಂದಕ್ಕೆ ಯಿರುವ
16 ಸಮುದಾಯ ಗದ್ಯಾಣಂ । ೧೪೦ ಎಂ–
17 ದು ಬರಧ್ವಕಲು [। *] ಯಿದಕ್ಕೆ ಯುರಸುಪ್ರಧಾ–
18 ನರು ಯಧಿಕಾರಿ ಗ್ರಾಮಣಿಗಳು ಆ–
19 ರೊಬ್ಬರುಂ ಯಿಲ್ಲೆಂದರಾದೆಡೆ ಗಂಗೆ
20 ವಾರಣಾಸಿಯು ತಡಿಯಲು ಸಾ–
21 ವಿರಕವಿಲ್ಲೆ ಸಾವಿರ ಬ್ರಾಹ್ಮಣರ ಕೊಂದ
22 ದೋಷ॥ ಮಂಗಳ ಮಹಾಶ್ರೀಶ್ರೀ

---

1 ತೇದಿವಿವರ – ಶಕವರ್ಷ ೧೧೮೪, ದುಂದುಭಿ, ಶ್ರಾವಣ ಬ॥ ೧೩, ಸಿಂಹಮಾಸ ೧೬ =ಕ್ರಿ. ಶ ೧೨೬೨, ಆಗಸ್ಟ್ : ೧೩

2 ಮೂಲಪ್ರಕಟಣೆ: ARSIE 1927, No. 364; S.I.I. Vol. IX-part-1 No. 396; ತುಳುನಾಡಿನ ಶಾಸನಗಳು (ಕೆ ವಿ. ರಮೇಶ ಮತ್ತು ಎಂ.ಜೆ. ಶರ್ಮ) No. 43.
ಶಾಸನದ ಪೂರ್ಣಪಾಠವನ್ನು ಇಲ್ಲಿ ಕೊಡಲಾಗಿದೆ. ಮೇಲಿನ ದಾಖಲೆಗಳಲ್ಲಿ ಶಾಸನದ ಪೂರ್ಣಪಾಠ ಇಲ್ಲ.

## ೨: ಚಕ್ರವರ್ತಿ ಎರಡನೆಯ ಹರಿಹರನ ಶಾಸನ:

(ಕುಂದೇಶ್ವರ ದೇವಾಲಯ ಸಮೀಪ ಗದ್ದೆಯಲ್ಲಿ ತುಂಡಾಗಿ ಬಿದ್ದಿರುವ ಶಾಸನಕಲ್ಲು) ಮೇಲ್ಭಾಗ ತುಂಡಾಗಿ ಬಹಳಷ್ಟು ಸಾಲುಗಳಲ್ಲಿನ ಬರಹ ಹಾಳಾಗಿದೆ. (ಸಾಲುಗಳು 1 ರಿಂದ 5)

6 ........................... ೪ ಹೊಂಸು [illegible] ಂಟು
ಬ್ರಾಹ್ಮರ ಭೋಜನಕ್ಕೆ [illegible]
7 .............................. ಬ್ರಾಹ್ಮಣ [illegible]
..........................ಉತ್ತ [illegible]
8 ಬ್ರಾಹ್ಮರ............. [illegible]
9 ............................................ ...
10 .................. ಈ ಬಡಗಲು ಪಡುವಲು ಪಾರಂಬಳಿಯ ಗಡಿಯಿಂ ಮೂಡಲು ಬಡಗಲು
11 ..........ತನಗಡಿಯಿಂ ತೆಂಕಲು ಮಕಿಕುಕನ ಗಡಿಯಿಂ ತ್ಕೆಂಕಲು ಇಂತಿ ಚತು-
12 ಸ್ಸೀಮೆಯೊಳಗಳ ಬಯಲು ಮೆಕಿಮರ ನಿಕ ನಿಡಿಲು ನಿಧಿನಿಕ್ಷೇಪ ಜಲ ಪಾಶಾ-
13 ಣ ಸಹ ಬಿತ್ತುವ ಬೈದ್ಯೆ ಕಣಂಗಿಲು ಹಾನೆ ೪೦.................ದ ೪೦ ಕ್ಕಂ ಗೇಣಿ ಅ-
14 ಕ್ಕಿ ಪ್ರತಿ ವ ೧ ಕಂ ಬಾರಕೂರ ಕಂಚಿನ .............ಕ್ಕೆ ಸಲುವ.......... ನಾಡಹಾನಿ ........ಉ-
15 ..............ಅಕ್ಕಿ ಹಾನಿ ೪೦ ಲ್ಲೆಕದ ಮುಡೆ (೫೨೫) ಹಾಗೆ ಲೆಕ್ಕದಲ್ಲಿ ....................ಹಾನೆ

16 ಲ್ಳ ಆಕ್ಕಿಯನು ಕುಂದೇಸ್ವರದಲು ಉಂಬ ಬ್ರಾಹ್ಮರ.......... ಯು
ಬಾರ (ಕೂರ)

17 ............ಣಿಕ (ಟಿ) ರು ನಡಸಿ ಬಹರು (।*) ಯಿ ಬಾಳಿಂಗೆ
. ......ಅನಾ

18 (ಯ) ಆಕರ ಅಲುದು ಯಿಲ್ಲವೇ ಸರ್ವಮಾನ್ಯವಾಗಿ ಕೊಡುವನು
........... ದರ

19 ............ ..ಊ ಸಂಮಂದದಿಂದ ಯೀ ಚತು.................................
.................................... ..........ಹೇಳಿ ಬ ಊ್ಸ

20 ಕೊಂಡವಾಗಿ ಯೀ ಧರ್ಮ್ಮದ ಬಾಳಿಂಗೇ ಉಳ..............................
.............................................................

21 ದನದ ......... ........ಅರಮನೆ ............ತೆರುಗ ೧೨೦೦ ಹೊಂನು
ಉಡುಪ (ಮು) ಕ್ಕಂಣ (ನ) ಡಸಿಕೊ–

22 ಂಬನು ಆ ಚಂದ್ರಾರ್ಕಸ್ಥಾಯಿಯಾಗಿ **ಮಲ್ಲಪ್ಪವೊಡೆಯರು** ಮಾ-

23 ಡಿದ ದಂಮ್ಮ್ರಗ್ರಾಮ ಹಂನೆರಡ ಊವೊಪ್ಪ ಕುಂದೇಸ್ವರದೇ

24 ವರು ಮಂಗಳ ಮಹಾ ಶ್ರೀ ಶ್ರೀ ಶ್ರೀ

---

1 ತೇದಿವಿವರ : ಹದಿನಾಲ್ಕನೆಯ ಶತಮಾನದ ಉತ್ತರಾರ್ಧ

2 ಮೂಲ ಪ್ರಕಟಣೆ : ARIE 1970-71, No : 212

**೩: ಚಕ್ರವರ್ತಿ ಇಮ್ಮಡಿ ಬುಕ್ಕರಾಯನ ವಡೇರಹೋಬಳಿ ಶಾಸನ**
(ಕುಂದಾಪುರ: ವಡೇರಹೋಬಳಿಯ ಬರಹದ ಕಲ್ಲುಗುಡ್ಡೆ ಎಂಬ ಜಾಗದಲ್ಲಿ-
ರುವ ಶಾಸನ ಕಲ್ಲು)

1 ಶ್ರೀಗಣಾಧಿಪತಯೇ ನಮಃ । [। *] ನಮಸ್ತುಂಗ ಶಿರಸ್ತುಂಬಿ
ಚಂದ್ರ ಚಾಮರಚಾರವೇ ತ್ರೈ-

2 ಯಿ ಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ [। *]
ಸ್ವಸ್ತಿಶ್ರೀ ಜಯಾಭ್ಯು-

3 ದಯು ಶಕವರುಷ ೧೩೨೮ನೆಯ ವರ್ತಮಾನ ಪಾರ್ಥಿವ
ಸಂವತ್ಸರದ ಫಾಲ್ಗುನ ಶುದ್ಧ

4 ೧೦ ಸೋ । ಶ್ರೀಮನ್ಮಹಾರಾಜಾಧಿರಾಜ ಪರಮೇಶ್ವರ
ಅರಿರಾಯ ವಿಭಾಡ ಭಾಷೆ ತಪ್ಪುವ

5 ರಾಯರಗಂಡ ಶ್ರೀ ವೀರಪ್ರತಾಪ ಬುಕರಾಯರು ರಾಜ್ಯಾಭ್ಯು
ದಯದಲು ತಂನಿರೂಪ-

6 ದಿಂ ಬಾಚಣ ಒಡೆಯರು ಬಾರಕೂರು ರಾಜ್ಯವ ಪ್ರತಿಪಾಲಿಸುವಲ್ಲಿ।
ದಯಿತ್ಯಾ

7 ರಿ ನಾದಿನಿದನೋ ಶ್ರೀಮಾಂಶತ್ಸ್ರಂಗಸೂಖಿರ ಯಸ್ಯ ದಂಷ್ಟ್ರಾ
ಮೂಳವಳೇನ ದಧ್ಯೇ ಭೂ-

8 [ತ]ಳ ಪಂಕಜಂ । ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋ
ಖಿಳಂ ಜಗತ್ ನರ್ಮ್ಮ [ಮೇ]

9 ತಮಹಂ ವಂದೇ ವಿದ್ಯಾತೀರ್ಥಮುನೀಶ್ವರಂ [। *] ಯ [ತ್ಕೃಪಾ]
ವೀಕ್ಷಣಂ ದಿಕ್ಷು ಸವಾ [ೞ] ವೇದ [ವ] ತಿ [೦]

10 ಸತಿ ವಿದ್ಯಾರಣ್ಯ ಗುರುಂ ವಿದ್ಯಾರಾಜಕೇಸರಿಣಂ ಭಜೇ।
ಬಹವೋಗ್ನುಠವ-

11 ಸ್ಯಂತಿ ವಕ್ಷಸ್ಥಾ ಭಾನವೋಯಥಾ। ಯೋಕೋ ... ತೀ
ತೀ [ಥೋರ್ಣೀ] ರಾಜತ್ವೇ ಭಾನುವಾ-

12 ನಿವ [। *] ನರಸಿಂಹ ಶಾರದಾಖ್ಯೇ ಯತಿರಾಜೋರಾಜತೀಹ
ಧರಣೀತ [ಳೇ] ಕಂನ ಹ್ಯ-

13 ಥಯತಯನಾಕನೀಕೇ, ಸ್ವಸ್ತಿ ಶ್ರೀ ಪರಮಹಂಸ ಪರಿ
ವ್ರಾಜಕಾಚಾರ್ಯ-

14 ರು ಮಪ್ಪ ಸಿಂಗೇರಿಯ ನಾರಸಿಂಹ ಭಾ (ರತೀವೊ)ಡೆಯರ
ದಿವ್ಯ ಶ್ರೀಪಾದಪ-

15 ದ್ಮಂಗಳಿಗೆ ಕುಂದಾಪುರದ ಗ್ರಾಮದ ಒಳಗಣ ಹಂಗರು
ಅಧಿವಾಸದ ಊರು ಧನಿ-

16 ಯರ ಜನ ೨ ಎರಡು ಹಂಗರ ಭ (ಟ)ರುಂನು ಅಂತು
ಊರು ನಾಲ್ವರುಂ ವಾಸ್ತೀ-

17 ವ ವಯಿದ್ಯ ನಾರನ ವಯಿದ್ಯ ವಿಷ್ಣು ಸಭಾಯಿತನ ವ್ಯಗ
ನಾರಣ ಸಭಾಯಿತ ಆ-

18 ತನ ತಂಮ್ಮ ಪ್ಪೇರ್ಥಾಳ ಸಭ್ಯಯಿಂತಿ ನಿಬಧ್ಧ ಸ್ತ್ರೀ ಪುತ್ರರಾದಿ
ದಾಯಾದ್ಯ ಸಾವಂ-

19 ತರು ವೊಳಗಾದವರಿಂದ ಬಂದ ಬ್ರಹ್ಮದಾಯದ ಮೂಲಕ್ರಯ
ದಾನಕ್ಕೆ ಸಲು-

20 ವ ಭೂಮಿಯನು ಮೂಲವ ಕೊಟ ಶಾಸನದ ಕ್ರಯವೆಂತೆಂದರೆ ಆಭೂ-

21 ಮಿಯ ಚತುಸ್ಸೀಮೆಯ ವಿವರ ಮೂಡಲಿಂ ನಡೆವ
ಹೆದ್ದಾರಿಯಿಂ ದಂ ಪಡು-

22 ವಲ ತೆಂಕಲ ವಯಿದ್ಯನ ಮಂಜನ ಮಕ್ಕಿಯಿಂದ ಯಿಕ್ಕಿದ
ಕಲ್ಲಿಂದಂ ನೀ-

23 ರುಹರಿದ ಸಾಲಿಂದಂ[ಅಚ]ಳದೇವನ ಗಡಿಯಿಂದಂ ಸುರಯಿಕ್ಕಿದ ಕಲ್ಲಿ-

24 ಂದಂ ಬಡಗಲು ಪಡುವಲು ಮಕ್ಕಿಯ ಕುಂನ್ಯಂಣ ಕೋಟಿನಾಥಭ [ಟ್ಟ]

25 [ಕುಂ] ಪುರುಸಂಣ ಸೆಟಿ ಮಲೆಯಾಳಿ ಬೆಟಂದಂ ಮೂಡಲು ಬಡಗಲು

26 ಕೋಟದಧಿವಾಸದಿ ಯಿಕ್ಕಿದ ಕಲ್ಲಿಂದಂ ಎತಿದ ಬರೆಯಿಂದ
ತೆಂಕಲಯಿಂ

27 ತೀ ಚತು ಸ್ಸೀವೆಯ ವೊಳಗುಳ್ಳ ಬಾಳು ಬೆಟ್ಟುಮನೆ ಹಟ್ಟಿಕುಳ
ಭಾವಿಮಕ್ಕಿ

28 ಮರನಕ್ಕ ನಿಡಿಲು ನಿಧಿ ನಿಕ್ಷೇಪ ಜಲ ಪಾ [ಷಾ*] ಣ ಯಕ್ಷೀಣಿ
ಆಗಾಮಿಸಿದ್ಧ ಸಾಧ್ಯ ತೇಜ [ಸ್ವಾ]

29 ಮ್ಯ ಅಷ್ಟಭೋಗ ಯಿಂತಿಷ್ಟವಾ ಮೂಲಕ್ರಯಕೆ ಸಲುವ
ಅರ್ಥವನು ಕೊಂಡು

30 ..................ಬನೂಕಾ ಹಾಗಿ ಸರ್ವಮಾ (ಂ) ನ್ಯವಾಗಿ, ಸಿಂಗೇರಿಯ
ಶ್ರೀನರಸಿಂಹ ಭಾರತೀ ಶ್ರೀ

31 ಪಾದ ಒಡೆಯರ ದಿವ್ಯ ಶ್ರೀಪಾದಪದ್ಮಂಗಳಿಗೆ ಧಾರಾಪೂರ್ವಕವಾಗಿ
ಮೂಲಕ್ರ-

32 ಯ ದಾನಕೆ ಸಲುವಂತಾಗಿ ಧಾರೆಯನೆಱದು ಕೊಟೆಉಯಿಊ ಭೂ-

33 ಮಿಗೆ ಕೋಟೀಶ್ವರ ದೇವರಿಗೆ ನಾಡಹಾನೆಯಲು
ನಾಗಂದುಗದಲು ಮೂರು

34 ಮೂಡೆ ಭತ್ತ ಚಿಕ್ಕ ದೇವರಿಗೆ ಆಸೋಡಿ ಸೋನೆಗೆ ರುದ್ರಪೂಜೆಗೆ
ಅರುವತ್ತು ಹಾ-

35 ನೆ ಅಕ್ಕಿಯನೂ ಕೊಟ್ಟು ಸುಖದಲೂ ಭೋಗಿಸುವಂತಾಗಿ
ಕೊಟ್ಟ ಶಾಸನ ಯಿಊ

36 ಶಾಸನದಲಿ ಯಿದ್ದ ಭೂಮಿಗೆ ಹಾನಿ ಹಂಗರಧಿವಾಸದ ಜೆಜ್ಜಿಯ ವಿ-
37 ಷ್ಣು (ಹೆಬಾರ ಕೇಶವತುಂಗ) ಸಾಕ್ಷಿಗಳು ಕೋಟಾಧಿವಾಸದ
ಮಾಧವ ಸಬಾಯಿತನ
38 ಮಗ ನಾರಣ ಸಬಾಯಿತ ನಾರಣಕಾರಂತನ ಮಗ ವಿಷ್ಣುಕಾರಂತ ಮೂ
39 ಡಣದ ಮನೆಯ ಅಪ್ಪಂಣ ಗೋವಿಂದ ಬಿನಾಣಿ ಗ್ರಾಮಭಟರ ಬ-
40 ರಹ ಯೀ ಶಾಸನದಲ್ಲಿ ಪ್ರಮಾಣಿನ ಧರ್ಮದ ಭೂಮಿಗೆ ಆರೊಬ್ಬರು
41 ತಪಿದವರಿಗೆ ವಾರಣಾಸಿಯಲು ನೂಱಿಪ್ಪತ್ತೊಂದು ಕವಿಲೆಯ ವ-
42 ಧಿಸಿದ ಪಾಪದಲ್ಲಿ ಹೋಹರು ಶ್ರೀ ಕೋಟೀಶ್ವರ ಲಿಂಗವ ಚಲಿ-
43 ಸ್ತ ಪಾಪದಲಿ ಹೋಹರು [।।*] ಸ್ವದತ್ತಂ ಪಾಪರದ [ತ್ತಂ]
ವಾಯೋ ಹರೇತಿ ವಸುಂಧರಾ [o*] ಷಷ್ಟಿ
44 ವರ್ಷ ಸಹಸ್ರಾಣಿ ವಿಷ್ಟಾನಾಂ ಜಾಯತೇ ಕ್ರಿಮಿ [ಃ*]
ದಾನಪಾಲನಯೋರ್ಮಧ್ಯೇ ದಾನಾ [ಚ್ಛ್ರೇ]ಯೋ-
45 ನ್ನುಪಾಲನಂ ದಾನಾ ಸ್ವರ್ಗಮವಾಪ್ನೋತಿ ಪಾಲನಾಂಚ್ಯುತಂ
ಪದಂ....................ಒ-
46 ಪ್ಪ ಕುಂದೇಶ್ವರ ದೇವರು ಕೋಟಿನಾಥ ದೇವರು ಬೆಟ್ಟದೇವರು
ಚಿಕದೇವರ ಚಿಕ್ಕದೇ
47 ವರು ಚಿಕದೇವರ ಹಾಲಕಾ ಱರ ಊರ
ಚಿಕದೇವರು ಚಿಕದೇ
48 ವರು ಸಾಕ್ಷಿಗಳು ಒಪ್ಪ ಕುಂದೇಶ್ವರ ದೇವರು ಕುಂದೇಶ್ವರ-
ದೇವರು ಚಿಕದೇವರು ಯಿೂ-
49 ಶಾಸನದಲಾದ ಪ್ರಮಾಣಿನ ಭೂಮಿಯನೂ ಶ್ರೀ ನರ-
50 [ಸಿಂಹ]ಭಾರತೀ ಶ್ರೀಪಾದ ಒ(ಡೆ)ಯರು........
51 ........ ....................ಡದ [ದೇವಂಣ]
52 ............................ಕೆ ದಾನವಾಗಿ........ಸಲುವ .......
53 ............................ ........ಮನೆಗೆ ...............
54 ..................................................
55 .......................................ಮಹಾ ಶ್ರೀಶ್ರೀಶ್ರೀ ॥

1 ತೇದಿ ವಿವರ :

ಶಕವರ್ಷ ೧೩೨೮ನೆಯ ಪಾರ್ಥಿವ ಸಂವತ್ಸರದ ಫಾಲ್ಗುಣ ಶುದ್ಧ ೧೦ ಸೋ[ಮವಾರ]= ಕ್ರಿ. ಶ. 1406 ಫೆಬ್ರುವರಿ 28 ಭಾನುವಾರ [ಸೋಮವಾರ ಅಲ್ಲ]

2 ಮೂಲ ಪ್ರಕಟಣೆ :
ARSIE 1928 No. 369; SII; Vol IX Pt II No. 430

## ೪: ವಿಜಯನಗರ ಚಕ್ರವರ್ತಿ ಇಮ್ಮಡಿ ದೇವರಾಯನ ಶಾಸನ :

(ಕುಂದೇಶ್ವರ ದೇವಾಲಯದ ಹೊರಪ್ರಾಕಾರದಲ್ಲಿರುವ ಶಾಸನ ಕಲ್ಲು.)

ಮುಂಭಾಗ

1 ಶ್ರೀಗಣಾಧಿಪತಯೇ ನಮಃ ।ಶ್ರೀಸರಸ್ವತ್ಯಾಯೇ ನ ಮಃ । ಶ್ರೀಗುರು
2 ಭ್ಯೋನಮಃ । ಶುಭಮಸ್ತು । ಶ್ರೀಕುಂದೇಶ್ವರಾಯ ನಮಃ । ನಮಸ್ತುಂಗಶಿ-
3 ರಶ್ಚುಂಬಿ ಚಂದ್ರಚಾಮರ ಚಾರವೇ । ತ್ರೈಲೋಕ್ಯ ನಗರಾರಂಭ ಮೂ-
4 ಲಸ್ತಂಭಾಯ ಶಂಭವೇ ॥ ಸ್ವಸ್ತಿ ಶ್ರೀ ಜಯಾಭ್ಯುದಯ ಶಕ-
5 ವರ್ಷ ೧೩೪೭ ಸಂದು ೮ ನೆಯ ವಿಶ್ವಾವಸು ಸಂವತ್ಸರದ ಚೈತ್ರಸು
6 [೧೦]ಮಂ ಶ್ರೀಮನ್ಮಹಾರಾಜಾಧಿರಾಜ ರಾಜ ಪರಮೇಶ್ವರ ಶ್ರೀ ವೀ-
7 ರ ಪ್ರತಾಪ ದೇವರಾಯ ಮಹಾರಾಯರು ವಿಜಯನಗರದಲೂ
8 ಸಕಲ ವರ್ಣಾಶ್ರಮ ಧರ್ಮಂಗಳನು ಪ್ರತಿಪಾಲಿಸುತ್ತಿಹ ಕಾಲದಲ್ಲಿ
9 ಶ್ರೀದೇವರಾಯ ಮಹಾರಾಯರು ಹರಿಯಪ್ಪ ದಂಣಾಯಕ ವೊ-
10 ಡೆಯರ ನಿರೂಪದಿಂದ ಬಾರಕೂರ ರಾಜ್ಯವನು ನರಸಿಂಹದೇವವೊಡೆ-
11 ಯರು ಪ್ರತಿಪಾಲಿಸುತ್ತಿಹ ಕಾಲದಲೂ ಕುಂದಾಪುರದವೊಳಗ-
12 ಣ ಕುಂದೇಶ್ವರದೇವರ ಸಂನಿಧಿಯಲೂ ಪೂರ್ವದಲ್ಲಿ ಪೂರು ಜಗತ್ತು
13 ಆದ್ದಿನದಲೂ ಗುಡಾನೂರ ದೇವಂಣ ಸೇನಬೋವ-ಮಾಡಿಸಿದ ಧಂ-
14 ...ರ್ಮವೂ ನಡೆಯದೇಯಿಂಕಲಾಗಿ ಆ ನರಸಿಂಹದೇವ ವೊಡೆಯರು

15 ಕುಂದಾಪುರದೊಳಗಣ ಗ್ರಾಮ ಜಗತ್ತು ಮುಕ್ಕಾಲಟ್ಟಿಗಳೆನು
16 ಕರಸಿ ವಿಚಾರಿಸಿ ಪುರೋಹಿತ ಸ್ಥಳವನಳದಾ ಕುಳವ ಕಟ್ಟಿ ಅರ-
17 ಮನೆಗೆ ಸಿದ್ಧಾಯ ನಷ್ಟವಿಲ್ಲದೇ ಬರಿಚಿ ಆದಂಮ್ಮದ ಭೂಮಿಯನೂ
18 ಆಚಂದ್ರಾರ್ಕ ಸ್ಥಾಯಿಯಾಗಿ ನಡೆವ ದರ್ಮ್ಮದ ಭೂಮಿಯ ವಿವರ
ಆ ಅಧಿ–
19 ಪಾಸದ ವೊಳಗೆ ಮೂಡಲು ದೇವರ ಅಮ್ಮತಪಡಿಯವೊಕ
[ಲೂ] ಕಟ್ಟ [ತ್ತಿ]
20 ಳಿಂದಂ ಪಡುವಲು ತೆಂಕಲು ಹೆಬ್ಬಾರುವನ ವಿಷ್ಣು ಉಳ್ಳೂರುಗಳ ಮು-
21 ಳಿಯಿಂದಂ ಬಡಗಲು ಪಡುವಲು ವಿಷ್ಣುಕಾರಂತನ ಗಡಿಯಿಂದಂ
22 ಮೂಡಲು ಬಡಗಲು ನೀರು ಹರಿವತೋಡಿದಂ ತೆಂಕಲು ಯಿಂತೀ
23 ಚತುಸ್ಸೀಮೆವೊಳಗೆ ಬಿತ್ತುವೆ ಬೀಜವರಿ ಬಯಲು ನಾಗಂಡುಗ ಕಣ–
24 ದಮಂಗಿಯ ಭೂಮಿಗೆ ಸಲುವ ವೊಡೆಯರ ಬೆಟ್ಟಿನ ಚತುಸ್ಸೀಮೆ
25 ವಿವರ ಮೂಡಲು.......................ಕ್ಕಳ ಗದ್ದೆಯಿಂದಂ
26 [ಪಡುವೊಲು].............ನಡೆವ ದಾರಿಯ್ಯಿಂ ಬಡಗಲು [ಪಡುವೊಲು]
27 ...................ನ ಗಡಿಯಿಂದ.................. ರಗಲು...............
28 .................... ಉಳ್ಳೂರುಗಳ ಗಡಿಯಿಂದ
29 ಂ ತೆಂಕಲು ಯಿಂತೀ ಚತುಸ್ಸೀಮೆವೊಳಗೆ ಮನೆ ಹಟ್ಟಿ................
30 ..... ......ವಿಷ್ಣುಕಾರಂತನ [ಹುಟುವಿನ]...........................ರುಗ
31 ...........ಯ...........ಲೂ ಅ.............. ..................ಬಾ
32 ...............ಅರಮನೆಗೆ ಹೋಹ ದಾರಿ ಸಹ ಬಾಗೆ ಮಾಡಿಕೊ[ಟ್ಟ]
33 [ರು] ವಿಷ್ಣು ಉಳೂರನು ನಂದಿಗೋಡಿಯ ನಾರಣ ಹೆಬಾರುವನ
34 .... ................. .......ದ ಬಿಢುದೇವ ಸ್ವ.... ... ..... . ... ......
35 ...............................ವರ್ಷಪ್ರತಿ ಬಹ .........................
36 ..................... ..........೨೭ ಅಕ್ಷರದಲೂ ಯಿಪ್ಪತ್ತೇಳು ಮೂಡೆ
37 [*]......................[ನಡಿಸಿಬಹರು]. ಮತ್ತಂ ತೆಂಕ[*] .........
38 ...............................ಸುಳುಗೋಡಿಯ............................
39 ..........................ಬಾಳುವ ಭೂಮಿ ...................................
40 .............................. ಪಡುವ .......... ......................

41 ...... ...... ........ ........... .......... .......

[ * ಶಾಸನಕಲ್ಲು 37 ನೆಯ ಸಾಲಿನಿಂದ ಎರಡೂ ಬದಿಗಳಲ್ಲಿ ಹಾಗೂ ಅಡಿಯಲ್ಲಿ ತುಂಡಾಗಿದೆ]

ಹಿಂಭಾಗ

42 ಲು ಉಳ್ಳೂರಕ್ಕಳು ಉಂಗುಪ್ಪ್ರಾಳ್ಳಿಗಳ ಗಡಿ
43 ಯಿಂದಂ ಬಡಗಲು ಕುಡುವೊಲು ಪೆದ್ದಾರಿಯಿಂ
44 ದಂ ಮೂಡಲು ಬಡಗಲು ಪೆದ್ದಾರಿಯ ವೋಣಿಯಿಂದಂತೆಂ–
45 ಕಲು ಯಿಂತೀ ಚತುಸ್ಸೀಮೆಯೊಳಗುಳ ಬಾಳು ಮೆಕ್ಕಿ ಮಕ್ಕಿ ಸಹ
46 ವಾಗಿ ಯೆರಡ್ಡುಮೂಡೆ ಬಿತ್ತುವ ಗಡಿಯ ಚತುಸ್ಸೀಮೆ ಆಸೀಮೆಯೊ
47 ಳಗಣಮನೆ ಕಣಹಾಡಿ ಬಾಳು ಬಾವಿಫಲ ಸಹವಾಗಿ ಭೂ (ಮಿಜ) -
48 ವಿಷ್ಣು ಉಡುಪನು ಬಿಂನಾಣಿ ಕೇಶ್ವನೂ ಗೇಣಿಯ ಬಿತ್ತು ಬತ್ತಕ್ಕೆವರು
49 ಷಂಪ್ರತಿ ನಡೆ ನಡಸುವ ಗೇಣಿ [ವೊರದ ಹಾನೆ ವೊರಮೆಯ] ಕೆಯಾಗಿ
50 ನಾಗಂಡುಗದ ಲೆಕ್ಕದಲೂ ಮೂ ೯ ಅಕ್ಷರದಲು ಅಕ್ಕಿಮೂಡೆ
51 ವೊಂಭತ್ತು । ಉ್ರುಶ್ಚಿಕ ತಿಂಗಳಲಿ ದೇವರ ಮುಂದಣ ದೀವಿಗೆಗೆ ನಾ–
52 ಲ್ಕು ಹಣವನು ನಡಸಿಬಹರು ಮತ್ತಂ ಅಧಿವಾಸದಲೂ ಮೂ–
53 ಡಲು ಮಂಚಾರ್ಕದ ಗಡಿಯಿಂದಂ ತೆಂಕಲು ಕಿಡಲಕ್ಕಿ
54 ದ ಗಡಿಯಿಂದಂ ಬಡಗಲು ಪಡುವಲು ಹೊಡೆಗೆ ಹ–
55 ರಿವ ತೋಡಿಂದಂ ಮೂಡಲು ಬಡಗಲು ಕಲಂ
56 ಕೆಯವರ ಗಡಿಯಿಂದಂ ತೆಂಕಲು ಯಿಂತೀ ಚತುಸ್ಸೀ–
57 ಮೆಯೊಳಗಣ ಮನೆ ಹಾಡಿ ಕಣ ಮಕ್ಕಿ ಜೆಯ್ಬಿ ಬಾವಿ
58 ಸೋಮೆ........ಬಿತ್ತುವ ಬೀಜವರಿ ಮೂ ೧೦ ಯ ಬಯಲನೂ
59 ರಾಮ ಉಡುಪನು ಬಿತ್ತಿ ವರುಷಂ ಪ್ರತಿ ವತ್ರುಕನಡ[ಸುವ]
60 ಗೇಣಿ ದೋಶದ ಹಾನೆ ದೊರಮೆಯಕಿಯಾಗಿ ನಾಲುಂಡೆ
61 ಯಲೂ ಅಕಿ ಮೂ ೧೮ ಅಕ್ಷರದಲೂ ಅಕ್ಕಿ ಮೂಡೆ ಹ–
62 ದಿನೆಂಟು ನಡೆದು ಬಹುದು [*] ಮತ್ತಂ ಪೂರ್ವದಲಿ ದಿನವೂ
63 ಹಿರ್ಯ ವಿಶ್ವಗಳು ಕುಂದ [ದಾ]ಂಗುಲದೊಳಗೆ ಆ ಜು ಮಂ–
64 ಧಿಯ ಬ್ರಾಹ್ಮಣ ಭೋಜನಕೆ ಬಿಠದಂ ನಟ್ಟ ಶಾಸನದ ಪ್ರಮಾ–
65 ಣೆನಲೂ ದೇವರ ಬಿಡು ದೇವಸ್ವದಿಂ ವರುಷಂ ಪ್ರತಿ ಅಕ್ಕಿ ಮೂ–

66 ಡೆ (೫೪) [॥ *] ಮತ್ತಂ ನರಸಿಹದೇವ ವೊಡೆಯರು ವಿಚಾರಿಸಿ
67 .. ..... .... [ಗದೆಮನೆ] ಅಲ್ಲಪ್ಪೋಗ್ರನಾಯಕ ಮೂಲ ವಾ
68 ಗಿ ಮಾಡಿಕೊಟ್ಟ ವೊಬ್ಬ ಬ್ರಾಹ್ಮಣಗ್ರು ಮಾಡಿದ ಧರ್ಮಕ್ಕೆ ವರುಷಂ
69 ಪ್ರತಿ [೭]ಹದು ಆಕ್ಕಿ ಮೂ ೯ ಉಭಯಂ ಬ್ರಾಹ್ಮಣರ ಜೀವಕ್ಕೆಂ
70 ಆಕ್ಕಿ ೬೩ ಆಕ್ಷರದಲೂ ಅಱುವತ್ತ ಮೂಱು ಮುಡೆ ಅಕ್ಕಿ-
71 ಯನೂ ವೊಂದು ಹಾನೆಯ ಏ ...ರ ..ರಿಯಾಗಿ...................
72 ರ ಅಲ್ಲಪ್ಪನು ನಡಸುವನೂ ಅಂತು ದೇವಂಣ ಸೇನ ಬೋ-
73 ವನು [ಊರು] ಜಗತ್ತು ಕೂಡಿ ಮಾಡಿದ ಧರ್ಮ್ಮ ದಿನವಹಿ ಭಾ-
74 ಸ್ಕರಪ್ಪಗಳು ಮಾಡಿದ ಧರ್ಮ ಕಟಿಂಬಹ ಆಕ್ಕಿ ಮೂ-
75 ಡೆ ೧೧೭ ಆಕ್ಷರದಲೂ ನೂಱ ಹದಿನೇಳು ಮುಡೆ ಅ-
76 ಕ್ಕಿಗೆ ನಡವ ಬ್ರಾಹ್ಮರ ಭೋಜನಕ್ಕೆ ನಾಲ್ಕುಶಾಕಕೊಂಬ [ಪಾನಕಸ]
77 [ಜ್ಜಿಗೆಬಾಳೆ] ಯಿಷ್ಟನೂ ಪ್ರತಿದಿನ ಊತಪ್ಪದೆ ನಡ[ಸುವ]ವಕೆ
78 ...........ಬಾಳೆಗೇಣಿ........ ... ಆಕ್ಕಿವೊಂದು ತಿಂಗಳು ..... .. . ....
79 ...................ದೇವರಿಗೆ ಬಿಡುವರು ದೇವಾಲ್ಯದ ಬಾ ........ . ...
80 ...............ಯಹೊಱಿಕೆ ದೊಗೆಲ ಸಲೆ ..........................
81 ...............[ನೂಪ್ರಿತಿ] ನಡ.................... ............ ..

[ಕೆಳಗಿನ ಭಾಗ ತುಂಡಾಗಿದೆ.]

ಇದೊಂದು ದೀರ್ಘಶಾಸನ. ಕಲ್ಲಿನ ಎರಡೂ ಬದಿಯಲ್ಲಿ ಬರಹ ಇದೆ. ಶಾಸನ ಇಲಾಖಾ ಪ್ರಕಟಣೆಯಲ್ಲಿ ಇದರ ಮುಂಭಾಗದ ೬೭ ಸಾಲುಗಳ ಪಾಠವನ್ನು ಮಾತ್ರ ಕೊಟ್ಟು ಉಳಿದ ಭಾಗ ನೆಲದಲ್ಲಿ ಹುದುಗಿದೆ ಎಂದು ತಿಳಿಸಲಾಗಿದೆ.

ಪ್ರಸಕ್ತ ಅಧ್ಯಯನಕ್ಕಾಗಿ ಇದರ ಸಂಪೂರ್ಣ ಭಾಗವನ್ನು ಪ್ರತಿಮಾಡಿ, ಓದಿ, ಪೂರ್ಣಶಾಸನಪಾಠವನ್ನು ಮೊದಲ ಬಾರಿಗೆ ಇಲ್ಲಿ ಕೊಡಲಾಗಿದೆ.

---

1 ತೇದಿವಿವರ:

ಶಕವರ್ಷ ೧೩೪೮ನೆಯ ವಿಶ್ವಾವಸು ಸಂವತ್ಸರದ ಚೈತ್ರ ಶು॥ ಮಂಗಳವಾರ: ಕ್ರಿ.ಶ. 1425, ಆಗಸ್ಟ್ 27 ಮಂಗಳವಾರ.

ಮೂಲಪ್ರಕಟಣೆ: (ಅಪೂರ್ಣ)

ARSIE, 1927, No. 365, SII Vol. IX pt II No. 441

## ೫: ವಿಜಯನಗರ ಚಕ್ರವರ್ತಿ ಮಲ್ಲಿಕಾರ್ಜುನರಾಯನ ಶಾಸನ

[ಕುಂದೇಶ್ವರ ದೇವಾಲಯದ ಹೊರಪ್ರಾಕಾರದಲ್ಲಿರುವ ಶಾಸನಕಲ್ಲು]

1 ..... .......... ...... ಧಿಪತಯೇನಮಃ ಶ್ರೀ....................
2 .... .. .......... . ..ಯೇ ನಮಃ ನಮಸ್ತುಂಗಶಿರಶ್ಚು ...............
3 ..... .............ಲೋಕ್ಯನಗರಾರಂಭಮೂಲಸ್ತಂಭಾಯ ಶಂ......
4 ........ ........ಶಕವರ್ಷ ೧೩೭೩ ಸಂದು ಯೆಪ್ಪತ್ತನಾಕ...............
5 ವತ್ಸರದ ಶ್ರಾವಣ ಬಹುಳ ೧೦ ಆದಿವಾರದಲು.............. .......
6 ...... ... .ರಾಜಪರಮೇಶ್ವರ ಶ್ರೀವೀರಪ್ರತಾಪಮಲ್ಲಿಕಾರ್ಜುನದೇ...
7 ............ ...... ವಿಜಯನಗರಿಯ ಸಿಂಹಾಸನದಲು ಸು........ ...
8 ........ .. ಸಕಳ ವರ್ನಾಶ್ರಮ ಧ(ಂ)ರ್ಮಗಳನೂ ಪ್ರತಿಪಾಳಿ........
9 .......... . ...ಹಾ ಪ್ರಧಾನವಲ್ಲಭದೇವ ದಣಾಯಕವೊಡೆಯ .. ...
10 .. ...... .....ಡೆಯರೂ ಬಾರಕೂರನಾಳುವಕಾಲದಲ್ಲಿ ಹರಿ.. .........
11 .... ... .......ಜೋಯಿಸ ಹರಿಯಪ್ಪಗಳು ಮಲ್ಲಿಕಾರ್ಜುನ ರಾ.... . .
12 ರ........ ...ಸಂಮಂಧದಿಂದ ಆರಾಯರು ಸೋಮವಾರ ಅಮಾ........
13 ದಲು ಮಲುದ್ಗಲ್ಯಗೋತ್ರದ ರುಕುಶಾಖೆಯ ಜೋಯಿಸ ಹರಿ...... .
14 ನ ಧಾರಾಪೂರ್ವಕವಾಗಿ ಕುಂದಾಪುರದ ಗ್ರಾಮದವೊಳಗೆ.... .......
15 ಪಡುವ ಸಾಲಿಂದ ಯೆತ್ತುವ ಪೆುದೆಯನ ಹರಿಯ ಉಪ್ಪಿನ ........ ..
16 ಹೊಂನು ಅಕ್ಷರದಲು ನಾಲ್ವತ್ತಾಯೆಂಟು ಹೊಂನು....... .......
17 ಅಡು ಮೂಡೆ ಬೆಟನೂ ಮಾನ್ಯ...........................
18 ಡೆಯದೂ ಕುಂದಾಪುರದ....................................
19 ಮಾ...................ನಾಗಿ................................. ...
20 ....................ಯ ಕೋಟಿನಾಥ ........ .. ............ ..
21 ಪಾದಂಗ..............................................
22 ....................ನ ವೊಡೆಯರ............................
23 ದತ್ತಾಂವಾಯೋಹರೇತ ವಸುಂ..........................
24 ಂ ಜಾಯತೇ ಕ್ರಿಮಿ (*) । ದಾನ ಪಾಲನ................ ...
25 ದಾನಾ ತ್ಸ್ವರ್ಗಮವಾಪ್ನೋತಿ ಪಾಲನಾ(ದಚ್ಯು)ತಂಪದಂ............
26 ವ ಗ್ರಾಮದ..............................................

27 ........ ...... ...ಬಹಕೂ........... ... ... ..ಪಾದಗಳಿಗೆ
28 .......... ... . . . ..... . ... . ... ...ಮಂಗಳಮಹಾಶ್ರೀಶ್ರೀ.
29 ... ....... ........................................ ........

---

1 ತೇದಿ ವಿವರ:

ಶಕವರ್ಷ ೧೩೭೪ನೆಯ (ಅಂಗೀರಸ) ಸಂವತ್ಸರದ ಶ್ರಾವಣ ಬಹುಳ ೧೦ ಆದಿವಾರ = ಕ್ರಿ.ಶ. 1452, ಆಗಸ್ಟ್ 10 ಗುರುವಾರ (ಆದಿವಾರ ಅಲ್ಲ).
(ಶಾಸನ ಇಲಾಖೆಯ ಪ್ರಕಟಣೆಯಲ್ಲಿ ಶಕ ೧೩೭೩= ಕ್ರಿ.ಶ. 1451 ಆಗಸ್ಟ್ 21 ಎಂದಿದೆ. ಇದು ತಪ್ಪು)

2. ಮೂಲಪ್ರಕಟಣೆ:

ARSIE: 1927, No. 366, SII Vol. IX Part II No. 455
ಶಾಸನದ ಬಹುಭಾಗ ಸವೆದು ಹಾಳಾಗಿದೆ.

# KUNDESHWARA OF KUNDAPURA

From the time man began to understand the impulses of nature, he began to study them. He started worshipping the forces of nature which he could neither control nor predict. Modes of worship, customs and tradition developed gradually. It led to the building of temples – the places of worship, in every village and town. Celebration of fairs and festivals in honour of the temple deities on special occasions also developed. The district of Dakshina Kannada presents a very good example for this. Kundapura is one such place in the district where tradition has grown along with a temple.

Kundapura, headquarters of the same taluk situated on the western sea shore, is very close to the ancient port town of Basaruru. The chief deity of this place is Kundeshwara. People hold the view that the town got its name after this god. The temple got the name 'Kundeshwara' because it was built by a king named 'Kundavarma'.

It is interesting to note that the name Kundapura came not [illegible] f the temple but because of its geographical [illegible]. In Kannada 'Kunda'means 'heap of sand'. [illegible] is situated at the mouth where a river [illegible] 'Pancha Gangavali'

joins the Western Sea. This led to the heaping of sea sand in large quantities. The original settlers of this place selected a name quite appropriate to its location. Thus came the name 'Kundagrama' (Village). Later it became 'Kundapura' (Town). To fulfil their religious requirements people built here a temple dedicated to Shiva and named it 'Kundeshwara' after the place.

Commoners caused the construction of this temple. Hence it is very simple with just one main cell built over a small raised square platform. Stylistically the original construction may go back to the 8th Century A. D.

The temple has a few stone inscriptions. They are of much historical value. The earliest available record here belongs to A. D. 1262. It was issued by the Alupa King Virapandyadeva. It mentions fixing of 140 gadyanas as village tax (Samudaya gadyana) for the vil'aje of Kundapura. A lady by name Nachi is mentioned as the officer (adhikariti Nachi). Thus we find Kundapura being administerec by a lady officer.

In ancient times there was a practice of appointing important people of various professions as adthikaris (officers). Here the record is silent about the profession of adhikariti Nachi.

A badly damaged inscription belonging to 14th Century A. D. has been found in a paddy field near the temple. It speaks of grants of land and 1200 gadyanas for worship and feeding of brahmanas in the temple. The grant was made by Mallappa Odeya, probably, the then Vijayanagara governor of the Barakuru rajya.

Kundeshwara seems to be a contribution of the Pasupata sect of Saivism. The influence of the Pasupatas was very storng throughout the coast of Karnataka from very early times. Koteshwara, very near Kundapura, was one of the important centres of the Pasupatas. Alupas were called kings of the Pasupatas. It seems there existed close contact between the two temples – Kundeshwara and Koteshwara. An inscription of A. D. 1406 mentions grant of land yielding 3 mudis of paddy to Koteshwara and 60 hanes of rice to Kundeshwara. Kundeshwara is mentioned here as 'Chikadevaru', indicating probably the junior position of Kundeshwara to Koteshwara. This land grant was made by 2 Danis and 2 priests of Hangaru adhivasa. It was given to Sri Narasimha Bharati Odeya, the pantiff of Sringeri Sharada Peetha as "mula-krayadana" (gift by sale of original rights).

Another inscription kept indside the prakara of the temple belongs to the time of the Vijayanagara

emperor Devaraya I and is dated A. D. 1425. Then Narasimhadeva Odeya was governing Barakuru rajya. After making a thorough enquiry, the Governor understood that the grants made earlier for various services in the Kundeshwara temple by Devanna Senabova had fallen into disuse. The record informs that, a person whose name is mentioned in a very respectable way as Hiriya Vishwagalu, had earlier made some grants for feeding six brahmanas daily and had recorded it in an inscription. This grant which had falled into disuse had been restored by Devanna Senabova along with his other grants. On enquiry it was found that the grant of land made by Allappa also had fallen into disuse. The governor restored all these grants without incurring any loss of revenue to the state. The grants thus restored fetched an annual income of 117 mudis of rice to the temple.

The other important inscription of this temple is dated A. D.1452 and belongs to the reign period of Mallikarjuna, the Vijayanagara emperor. Mahapradhana Vallabhadeva danayaka was then administering Barakuru rajya as governor. The governor made a grant of 48 honnu, which was the income from salt pans in Kundapura and a piece of land to Joisa Harriappa Kotinatha and (Sri) Padangalu are mentioned here. But as the record is very much worn out we cannot make out their importance. Any-

way it is clear from this inscription that salt was manufactured here.

## TEMPLE ART :

This temple of Kundeshwara is constructed a little away eastwards from the sea shore. It faces east and has two prakaras and a central shrine. In the centre of the inner Prakara stands a unicelled shrine on a raised square platform. It has a gopura over garbhagriha the roof of which of haystack. After independence it was replaced by copper sheets. The garbhagriha has a narrow Pradakshina-patha. The original structure dates back to C. 8th Century A. D. It seems to have been renovated during C. 11th Century A. D. The pilasters and the image of Nandi reflect the period. Recently the whole structure has been renovated without changing the original structure. However four small square gopuras have been added on the corners of Garbhagriha.

Niches were not there earlier. Now two of them are there on either side of the garbhagriha doorway. Beautifully carved black stone images of Ganesha and Parvati have been installed here.

A lot of renovation work is taking place. The inner prakara has been already renovated with a

fine dwara and a gopura over it. The outer prakara is being renovated now. A mahadwara with beauti ful gopura and mukhamantapa with two halls are coming up. Of the two halls one is named Sri Shankarakripa pravachana mandira and the other Sri Kundeshwara Kalyana mantapa. A beautiful marble image of Adi Shankaracharya has been gifted to the temple by the Swamiji of Sringeri to be installed in the Sri Shankarakripa Pravachana Mandira.

A big arch beautifully built in concrete adorns the entrance of the road leading to the temple. It reminds the people of the existence of the temple.

The entire renovation work is estimated to cost more than Rupees 15 lakhs. A little part of it has come from the state Government but rest of the amount has to be made good from the generous contributions of the devotees. Schemes have been drawn by the temple authorities to collect funds for effecting regular pujas in the temple and to complete the renovation work.

The temple has been sanctified by the visit of a number of saints and religious heads.

The temple is now a centre of cultural activities. Religious festivals in the temple are now followed by cultural activities. Kartika Deepotsava

is a famous festival here. On this occasion a competition in the decoration of lights will be held annually. The entire town with fine illumination gets a grand festival look. The Ganeshotsava Samiti established here arranges annually the Ganesha festival on a grand scale. It begins from the Ganesha Chaturthi day and continues for three to four days. Religious programmes are followed by a number of cultural programmes and competitions.

The Kundeshwara Yakshagana Sabha has taken up the programme of training interested young men in this performing folk art. At the same time it is arranging at regular intervals Yakshagana programmes.

How a temple can become the nucleus of a society depends entirely on that society itself. Kundeshwara of Kundapura has set a fine example of emulation.

*******

## ಅನುಬಂಧ-1

## ಶ್ರೀ ಕುಂದೇಶ್ವರ ದೇವರ ಸನ್ನಿಧಿಯಲ್ಲಿ ನಡೆಯುವ ಸೇವಾದಿಗಳ ವಿವರ

| | | |
|---|---|---|
| 1 | ಕರ್ಪೂರದ ಮಂಗಳಾರತಿ .... | 1-00 |
| 2 | ಕ್ಷೀರಾಭಿಷೇಕ .... | 4-00 |
| 3 | ರುದ್ರಾಭಿಷೇಕ .... | 8-00 |
| 4 | ಬಿಲ್ವಾರ್ಚನೆ : ಶತನಾಮ .... | 8-00 |
| 5 | ಬಿಲ್ವಾರ್ಚನೆ : ಸಹಸ್ರನಾಮ .. | 25-00 |
| 6 | ಪಂಚಾಮೃತ .... | 8-00 |
| 7 | ಹರಿವಾಣ ನೈವೇದ್ಯ .... | 50-00 |
| 8 | ಏಕಾದಶರುದ್ರ (ಸಂತರ್ಪಣೆ ವಿನಹ) .... | 35-00 |
| 9 | ಶತರುದ್ರ (ಸಂತರ್ಪಣೆ ವಿನಹ) .... | 125-00 |
| 10 | ರುದ್ರಾಭಿಷೇಕ (ಒಂದು ವರ್ಷಕ್ಕೆ ಪ್ರತಿ ಸೋಮವಾರ).... | 35-00 |
| 11 | ನಂದಾದೀಪ (12 ದಿವಸಕ್ಕೆ) ... | 60-00 |
| 12 | ನಂದಾದೀಪ(ಒಂದು ವರ್ಷಕ್ಕೆ) .... | 800-00 |
| 13 | ಪ್ರಮಾಣ ಕಾಣಿಕೆ .... | 15-00 |
| 14 | ಲಗ್ನ ಇತ್ಯಾದಿ ಶುಭಕಾರ್ಯ ಕಾಣಿಕೆ .... | 25-00 |
| 15 | ಸೋಣೆ ಆರತಿ ಕಾಣಿಕೆ .... | 15-00 |
| 16 | ಸತ್ಯನಾರಾಯಣ ವ್ರತ ಕಾಣಿಕೆ .... | 10-00 |
| 17 | ಬಸವನ ಕಾಣಿಕೆ .... | 10-00 |
| 18 | ತುಲಾಭಾರ ಕಾಣಿಕೆ .... | 15-00 |
| 19 | ಪ್ರಸಾದ ಕಾಣಿಕೆ .... | 5-00 |
| 20 | ಸಣ್ಣ ರಂಗಪೂಜೆ .... | 200-00 |
| 21 | ಮೃತ್ಯುಂಜಯ ಜಪ (12ದಿವಸ) .... | 84-00 |
| 22 | ಹಣ್ಣುಕಾಯಿ .. | 0-10 |
| 23 | ಜಲಾಭಿಷೇಕ .... | 2-00 |

## ಶ್ರೀ ಗಣಪತಿ ದೇವರ ಸನ್ನಿಧಿಯಲ್ಲಿ

| | |
|---|---|
| ಕರ್ಪೂರ ಮಂಗಳಾರತಿ | .... 1-00 |
| ಪಂಚಾಮೃತ | .... 8-00 |
| ದೂರ್ವಾರ್ಚನೆ : ಶತನಾಮ | .... 6-00 |
| ದೂರ್ವಾರ್ಚನೆ : ಸಹಸ್ರನಾಮ | .... 15-00 |
| ರಂಗಪೂಜೆ | .... 5-00 |
| ಮೂಡು ಗಣಪತಿ 25-ಕಾಯಿ (ಕಾಣಿಕೆ) | .... 2-00 |
| ಮೂಡು ಗಣಪತಿ 125-ಕಾಯಿ (ಕಾಣಿಕೆ) | .... 5-00 |
| ಮೂಡು ಗಣಪತಿ 1000-ಕಾಯಿ | .... 10-00 |
| ಪಂಚಕಜ್ಜಾಯ | .... 2-00 |
| 5-ಸೇರು ಅಕ್ಕಿ ಕಡಬು | |
| ನೈವೇದ್ಯ ಕಾಣಿಕೆ | .... 2-00 |
| 1-ಮುಡಿ ಅಕ್ಕಿ ಕಡಬು ಕಾಣಿಕೆ | .... 5-00 |
| [illegible]-ಕಾಯಿ ಗಣಹೋಮ | .... 10-00 |
| 5-ಕಾಯಿ ಗಣಹೋಮ | .... 55-00 |
| 12-ಕಾಯಿ ಗಣಹೋಮ ಕಾಣಿಕೆ | .... 10-00 |
| ಉಪನಿಷತ್ ಹೋಮ | .... 10-00 |
| ಕ್ಷೀರಾಭಿಷೇಕ | .... 4-00 |

## ಶ್ರೀ ಅಮ್ಮನವರ ಸನ್ನಿಧಿಯಲ್ಲಿ

| | |
|---|---|
| ಕರ್ಪೂರ ಮಂಗಳಾರತಿ | .... 1-00 |
| ಕುಂಕುಮಾರ್ಚನೆ | .... 4-00 |
| ಪಂಚಾಮೃತ | .... 8-00 |
| ಶಿವರಾತ್ರಿ 1-ದಿನದ ಪೂಜೆ | .... 25-00 |
| ಚಂಡಿಕಾ ಪಾರಾಯಣ | .... 15-00 |

| | | | |
|---|---|---|---|
| 6 | ಚಂಡಿಕಾಯಾಗ ಕಾಣಿಕೆ | .... | 10-00 |
| 7 | ದುರ್ಗಾ ಹೋಮ | .... | 45-00 |
| 8 | ಕ್ಷೀರ ಪರಮಾನ್ನ | .... | 6-00 |
| 9 | ಪುಷ್ಪಾಲಂಕಾರ ಪೂಜೆ | .... | 25-00 |
| 10 | ಶ್ರೀಸೂಕ್ತಾಭಿಷೇಕ | .... | 10-00 |
| 11 | ಕ್ಷೀರಾಭಿಷೇಕ | .... | 4-00 |
| 12 | ತ್ರಿಮಧು ನೈವೇದ್ಯ | .... | 8.00 |

**ವಿ. ಸೂ:–** ಎಲ್ಲಾ ಸೇವೆಗಳಿಗೆ ರಶೀದಿ ಹಾಗೂ ಪ್ರಸಾದ ಕೊಡುವ ವ್ಯವಸ್ಥೆ ಇದೆ.

